ರೂಢನಾಗಿ ಕುಳಿತುಕೊಳ್ಳುವನು. ಯಜಮಾನರು ಮಾರ್ಗಕ್ಕೆ ಇಳಿಯಲಿ, ಮನೆಯೊಳಗಣ ಸೀತೆಯನ್ನೇ ಎತ್ತಿಕೊಳ್ಳುವನು. ನೋಡಲಿಕ್ಕೆ ತಬ್ಬಲಿ, ಹಾರಿದರೆ ಹೆಬ್ಬುಲಿ.

'ಇಲ್ಲಂ ಲೋಕದೊಳೆಲ್ಲರಂ ಪೊಗಳುವಾ ಉಲ್ಲಾಸಕಂ ವಸ್ತು' ಎಂದು ಕವಿ ಹೇಳಿದ್ದಾನೆ, ಹಾಗಾದರೆ ಜನಗಳೊಡನೆ ಹ್ಯಾಗೆ ನಡೆಯಬೇಕು? ಹಿಂದಿನ ದನವು ಮುಂದಿನ ದನಕ್ಕೆ ಬತ್ತಲೆ ಎಂದಿತು. ದನಗಳೆಲ್ಲಾ ಬತ್ತಲೆಯೇ; ತನ್ನ ಬೆನ್ನುಮಾತ್ರ ತನಗೆ ಕಾಣುವುದಿಲ್ಲ. ಅನ್ಯರ ಛಿದ್ರಗಳಲ್ಲಿ ಬೆರಳು ತುರುಕಿಸಬಾರದು. ಹರಕುಬಟ್ಟೆ ಹರಿದೀತು, ಬಿರುಕು ಮಡಿಕೆ ಬಿರಿದೀತು. ಪರರ ದೋಷಗಳನ್ನು ಹುಡುಕುವವರೇ ಪುರೋಭಾಗಿಗಳು. ಇವರು ತಮ್ಮ ಎಡೆಯಲ್ಲಿ ಕತ್ತೆ ಸತ್ತುಬಿದ್ದರೂ, ಪರರ ಎಡೆಯ ನೊಣಕ್ಕೆ ಕೈ ಚಾಚುವರು. ಇವರು ಸೂಜಿಯಂತೆ ಶಿಲೀಮುಖರು. ಗುಣವನ್ನು ಕೊಟ್ಟರೂ ಅದನ್ನು ಹಿಂದಿಟ್ಟು, ಮೊನೆಮೊಗದಿಂದ ಚುಚ್ಚುವರು. ಇಂಥವರ ಕೆಳೆ ವಿರೋಧಕ್ಕೆ ಬೆಳೆ. ಇವರೊಡನೆ ಆಟ, ಸನ್ಮಾನಕ್ಕೆ ಕಾಟ.

ಪಾಪಮಯವಾದ ಪ್ರಪಂಚದಲ್ಲಿ ಕವಲಿಲ್ಲದ ಕೊಂಬೆಯಿಲ್ಲ; ಕಳೆಯಿಲ್ಲದ ಗದ್ದೆಯಿಲ್ಲ. ಸಾವಿರ ಕುದುರೆ ಸವಾರನಾದರೂ ಒಂದು ದಿನ ಬಂಡಿಯನ್ನು ಉರುಳಿಸಿ ಬಿಟ್ಟಾನು. ನಳಪಾಕ ಮಾಡುವ ಅಡಿಗೆಯವನಾದರೂ ಒಂದು ವೇಳೆ ಅನ್ನಪಾತ್ರೆಯನ್ನು ಕೈತಪ್ಪಿ ಒಡೆದು ಹಾಕ್ಯಾನು. ಜನಗಳು ನಡೆಯುವಾಗ ಎಡವಿ ಬೀಳುವರು. ಆಚರಿಸುವಾಗ ಸ್ಖಲಿತಗಳನ್ನು ತೋರಿಸುವರು. ಅದಕ್ಕೆ ಸಿಡುಕಬಾರದು. ನಮಗೆ ಎರಡು ಹೊಟ್ಟೆಗಳಿವೆ—ಅನ್ನ, ಉಪ್ಪನ್ನು ಹಾಕಿಕೊಳ್ಳಲಿಕ್ಕೆ ಒಂದು. ಅನ್ಯರ ತಪ್ಪನ್ನು ಹಾಕಿಕೊಳ್ಳಲಿಕ್ಕೆ ಇನ್ನೊಂದು. ಹೊಟ್ಟೆಗೆ ಹಾಕಿಕೊಂಡುದನ್ನು ಮತ್ತೆ ಬಾಯಿಗೆ ತರ ಸಲ್ಲ. ಮೆಲುಕು ಹಾಕುವುದು ಜಾನುವಾರುಗಳು. ಒಳಗೆ ನೋಡಿದರೆ ನಾವಷ್ಟಾದರೂ ಅಪೂರ್ಣರು. ತಾನು ಮಾದಿಗ, ಉಳಿದವರು ಮೀನು ತಿನ್ನುವರೆಂದು ಹುಲ್ಲು ಗುಡಿಸಲಿನವರು ನೆರೆಯುವನ ಮನೆಗೆ ಬಾಣ, ಬಿರುಸು ಬಿಡುವುದು ಸರಿಯೆ? ಪರರ ದೋಷಗಳನ್ನು ಹೆಕ್ಕಿ ತೆಗೆಯುವ ಮೊದಲು ನಮ್ಮ ದೋಷಗಳನ್ನು ನೋಡಿಕೊಳ್ಳಬೇಕು. ಅನ್ಯರ ಕೊಂಕು ತನ್ನ ಕೊರತೆಯನ್ನು ತೋರಿಸುತ್ತದೆ; ಯಾಕೆಂದರೆ ಎಲ್ಲಾ ಕತ್ತೆಗಳಿಗೂ ಕಿವಿ ನಿಡಿದಾಗಿದೆ. ತನ್ನ ಕಣ್ಣಿನಲ್ಲಿ ಕಿಸರು ಇದ್ದರೆ ಅನ್ಯರ ಮೈ ಕೆಸರು ತೋರುವುದು. ನಮ್ಮ ನೆರೆಯವನು ನಮ್ಮ ಕೈಕನ್ನಡಿಯಂತಿದ್ದಾನೆ; ಈ ಕನ್ನಡಿಯಲ್ಲಿ ತೋರುವ ತಪ್ಪುಗಳು ನಮ್ಮವೇ—ಎಂದು ತಿದ್ದಿಕೊಳ್ಳೋಣ!

ತಪ್ಪು ತಿದ್ದುವಾಗ ಎಚ್ಚರವಿರಬೇಕು. ಬಿರುಸಾಗಿ ಊದಿದರೆ ಬೆಂಕಿ ಆರೀತು, ಮೆಲ್ಲನೆ ಊದಿದರೆ ಹೊಗೆ ತುಂಬೀತು. "ಸ್ಮಾರಯೇ ನತು ಶಿಕ್ಷಯೇ" (ರಾಮಾಯಣ—ಜ್ಞಾಪಿಸುತ್ತೇನೆ ಶಿಕ್ಷಿಸುವುದಿಲ್ಲ) ಕೆಲವರು ಕಂಡವರ ಮನೆಯಲ್ಲಿ ತಲೆಹಾಕಿ, ತೂತುಗಳನ್ನು ನೋಡಿಕೊಂಡು, ತಮಗೆ ಬೇಕುಬೇಕಾದಂತೆ ಆ ಛಿದ್ರಗಳನ್ನು ಇನ್ನೂ ಬಿರಿಯಿಸುತ್ತಾರೆ. ಕಂಡದ್ದನ್ನು ಹೇಳಿದರೆ ಕೆಂಡದಷ್ಟು ಕೋಪ ಎಂದರೆ, ಕಾಣದ್ದನ್ನು ಹೇಳಿದರೆ ಇನ್ನೆಷ್ಟು ಕೋಪ ಬಂದೀತು! ಇವರು ನೆರೆಯುವರನ್ನು ತಿದ್ದುವವರಲ್ಲ; ಗುದ್ದುವವರು. ಆದ್ದರಿಂದಲೇ ಸಿದ್ಧನೀತಿಯಲ್ಲಿ—

ನುಡಿಯದಿರನ್ಯರ ಗುಣಪಿಮಂ। ವಿಡಿಯದಿರ್ರೈ ಲೋಗರೊಡವೆ ಎಣಿಸುವ ಪಾಪಂ॥
ಬಿಡು ಮೂದಲಿವ ನಂಟನ। ನಡೆಯದಿರು ವಿಲಗವರೊಂದು ಪೊರ್ದುವ ಕಡೆಯೊಳ್॥

ಆದ್ದರಿಂದಲೇ ದಾಸರು ಹೀಗೆ ಸಂಬೋಧಿಸುತ್ತಾರೆ—

ಪರನಿಂದೆಯನ್ನು ಮಾಡಿ। ನರಕಿಯಾಗ ಬೇಡ ಮನವೆ!॥

ಪಾಪಿಗಳು ಪಾಪಕ್ಕೆ ಪಶ್ಚಾತ್ತಾಪ ಪಟ್ಟರೆ, ಮತ್ತೆ ಮತ್ತೆ ಆ ಪಾಪದ ಮಾತನ್ನು ಎತ್ತಬೇಡ. ಸತ್ತ ಹಾವನ್ನು ಬಡಿದೇನು ಫಲ? ನೊಂದವರ ನೋಯಿಸದಿರು.

"ತಪ್ಪು ಸಾಧಿಸುವನೊಳಗಿಪ್ಪವನು ಕಡುಹೆಡ್ಡ" ಎಂದು ಸರ್ವಜ್ಞನು ಹೇಳುವನು. ತಪ್ಪು ಹೊರಿಸುವವನಿಗೆ ಒಪ್ಪುವವನು ಯಾರು? ಇಂಥಾ ನಿಂದಕರು ಬಾಯಿಗೆ ನಾಯಿಗಳನ್ನು ಕಟ್ಟಿಕೊಂಡು, ತಪ್ಪಲ ಬೇಟೆಯಾಡುವುದಕ್ಕಿಂತಲೂ ಪರರ ಸುಗುಣಗಳನ್ನು ಹೊಂದಿಕೊಂಡಿರುವುದು ಮೇಲು. ತನ್ನ ಕಾಲಡಿಯಲ್ಲಿ ಕಳಿತ ಕುಂಬಳವನ್ನು ಬಿಟ್ಟು ಪರರ ಅಡಿಯಲ್ಲಿರುವ ಸಾಸಿವೆಯ ಕಾಳನ್ನು ಯಾಕೆ ಹೆಕ್ಕಿಕೊಳ್ಳಬೇಕು? ಹಲಸಿನ ಮುಳ್ಳುಗಳನ್ನು ಬಿಟ್ಟು ತೊಳೆಯನ್ನು ಮೆಲ್ಲುವುದೇ! ನೀನು ರಾಜಹಂಸನಾದರೆ, ನೀರನ್ನು ಬಿಟ್ಟು ಹಾಲನ್ನು ಹೀರು. ಕಣ್ಣಿಂದ ನೋಡಿದರೂ, ಕಿವಿಯಿಂದ ಕೇಳಿದರೂ ಬಾಯಿಂದ ಆಡಬೇಡ.

ಕೊಡಬೇಕೈ ಕಿವಿಯನ್ನು ಸರ್ವರ ನುಡಿಗೆ।
ನುಡಿಬಾರದು ನೀನಡಿಗಡಿಗೆ॥

ನಿಂದೆಯೂ ಹುಸಿಯೂ ಅವಳಿಜವಳಿ ಕೂಸುಗಳು. ನಿಂದೆಯಿದ್ದಲ್ಲಿ ಹುಸಿ ತಾನು ನಿಂದೆಯೆನ್ನುವುದು. ನಿಂದೆಯು ಎದೆಕೆಡುಕು; ಹುಸಿಯು ನಾಲಗೆ ಕೆಡುಕು; ನಿಂದಾ ಬಾಯಿಗೆ ಪ್ರೇಮಳಾದೇವಿ ಅತ್ತಿಗೆ. ಪ್ರೇಮಳೆಯು ಮನೆಯಲ್ಲಿಲ್ಲದಿದ್ದರೆ ಬಾಲವಿತಂತುವಾದ ನಿಂದಾದೇವಿಯ ಆರ್ಭಟೆ ಹೆಚ್ಚು.

ಒಟ್ಟು ಏನೆಂದರೆ—ಪರಸ್ಪರ ಪ್ರೀತಿವಾತ್ಸಲ್ಯಗಳಿದ್ದರೆ ಒಬ್ಬರ ತಪ್ಪು ಮತ್ತೊಬ್ಬನಿಗೆ ತೋರುವುದಿಲ್ಲ. ಪ್ರೀತಿ ತಪ್ಪಿತೆಂದರೆ ಹುಲು ತಪ್ಪಲು ಬೆಟ್ಟವಾಗುವುದು. ಒಂದು ಕಂದಿನಿಂದ ಸಾವಿರ ಬಾಳೆಗಳನ್ನು ಬೆಳೆಸುವರು. ಇಂಥಾ ನಿಂದಕನ ಕಣ್ಣಿಗೆ ಭೂತಕನ್ನಡಿ ಇದೆ. ಇವನನ್ನೇ ಲಾಭಕರೆನ್ನುವರು. "ಲಾಭನುಡಿಗಳಲ್ಲಿ ಕೆಡುವುದು ಕೋವಿದರ ಮನ." ಲಾಭಕನಂತೆ ಇವನು ತಿಪ್ಪೆಯನ್ನೇ ಬಾಯಿಂದ ಕೆಡಹುವನು. ಇಂತವನನ್ನು ಕುರಿತು ಸರ್ವಜ್ಞ ಹೀಗೆ ಹೇಳುತ್ತಾನೆ.

ನೆಗ್ಗಿಲಿಯ ಹೊಲ ಹೊಲ್ಲ। ಸಿಗ್ಗು ವೇಷಿಗೆ ಹೊಲ್ಲ।
ಸುಗ್ಗಿಯಾ ದಿನಕೆ ಮಳೆ ಹೊಲ್ಲ ಕೊಂಡೆಯನ
ಸಿಗ್ಗಾಳೆ ಹೊಲ್ಲ ಸರ್ವಜ್ಞ॥

ನಾವು ಪಾಪಿಷ್ಟರು; ಆದರೂ ದೇವರು ನಮ್ಮನ್ನು ಪ್ರೀತಿಸುತ್ತಾನೆ.
ತಂದೆ ಗುರುಗಳ ನಡುವೆ ಒಂದು ಅಂತರ ಉಂಟು.

ತಂದೆ ತೋರುವನು ಶ್ರೀ ಗುರುವ ಗುರುರಾಯ
ಬಂಧನವ ಕಳೆವ ಸರ್ವಜ್ಞ॥

ಆದ್ದರಿಂದ ನಾವು ಬೇಸರಪಡಲು ಕಾರಣವಿಲ್ಲ. ಬದುಕಿ ಕುಳಿತು ಸಾಯುವ ಮೊದಲು ಯಾವುದೊಂದು ಒಳ್ಳೆಯದನ್ನು ಮಾಡೋಣ! ಮಲ್ಲನ ಮಾತು ಹರಟೆಯಾದರೂ ಸಾರವಿದ್ದರೆ ಹಿಡಿಯಿರಿ;

ಇಲ್ಲದಿದ್ದರೆ ಬಿಡಿರಿ! ಬಂಡಿ ಹೊರೆ ತುಂಬಿ ವಾಲಿದೆಯಾದರೂ, ಎತ್ತು ಬೆನ್ನು ಇರುಕಿಸಿ ಬಳಲಿದೆಯಾದರೂ ಮೆಲ್ಲಮೆಲ್ಲನೆ ನಡಿಸು. ಮನೆಗೆ ಸೇರಲಿ! ಪಡಸಾಲೆಯಲ್ಲಿ ಬಿದ್ದುಕೊಂಡು ಗೊರಿಕೆ ಹೊಡೆಯುವುದರಿಂದ ಫಲವೇನು? ತಪ್ಪಿದ್ದರೂ ಇಲ್ಲದಿದ್ದರೂ ಗದ್ದೆಯನ್ನು ಉಳಲೇಬೇಕು. ಇಲ್ಲದಿದ್ದರೆ, ಮುಂದಿನ ಮಳೆಗಾಲದಲ್ಲಿ ಊಟವಿಲ್ಲ. ನೇಗಿಲನ್ನು ಹಿಡಿದುಕೋ; ದೇವರು ಕೈಕೊಡುವನು.

ತಾಪದಾ ಸಂಸಾರ। ಕೂಪದೊಳು ಬಿದ್ದವರು
ಆಪತ್ತು ಅಳಿದು ಪೊರಮಡಲು ಗುರುವಚನ।
ಸೋಪಾನ ಕಾಣೋ ಸರ್ವಜ್ಞ॥

---

— ೮ —

ಅಯ್ಯಾ! ಪತ್ರಿಕಾ ಮುಖತಿಲಕರೇ,

ನಿಮ್ಮ ಪತ್ರಿಕೆಯಲ್ಲಿ ಅನಾಮಿಕ ಪತ್ರಗಳೆಂಬ ಲೇಖನವನ್ನು ಬರೆದವರು ಯಾರು? ಸಶೇಷ ಎಂಬುವರೇ. ಇವರು ಮಹಾ ಸೂಜ್ಞರು, ಸರ್ವಜ್ಞರು. "ಕೆಲವು ಸಾರಿ ಹುಟ್ಟಿದ ಹಸುಗೂಸುಗಳು ದಾರಿಯ ಬದಿಯಲ್ಲಿ ಕಾಡಿನಲ್ಲಿ ಪೊದೆಯ ಮರೆಯಲ್ಲಿ ಬಿದ್ದಿರುವ ರೀತಿಯಲ್ಲಿ" ಈ ಮಾತುಗಳು ಸಿದ್ಧ. ಕಳೆದ ತಿಂಗಳಿನ ೨೩ನೆಯ ತಾರೀಕಿನಲ್ಲಿ ಇಂಥಾ ಒಂದು ಗಂಡುಕೂಸು ದಾರಿಯಲ್ಲಿ ಕದ್ರೆಯ ದಾರಿಯಲ್ಲಿ ಬಿದ್ದಿತ್ತು. ಇಂಥಾ ಮೂಕ ಪತ್ರವನ್ನು (ಪುತ್ರ) ಪ್ರಕಟಿಸುವ ಕೃತ್ಯವು ಅಂಧಕಾರದ ಕೃತ್ಯವಲ್ಲದೇ ಮತ್ತೇನು? ಈ ಅನಾಮಿಕ ಪುತ್ರ ಹ್ಯಾಗೆ ಪ್ರಾಪ್ತವಾಯಿತೋ ಎಂದು ಪತ್ತೆಮಾಡುವುದಕ್ಕೆ ಮಗುವಿನ ಎಳೆ ತಾಯಿಯನ್ನು ಹಳೆ ಅಜ್ಜಿಯನ್ನೂ ಪೋಲಿಸಿನವರು ಬಂಧಿಸಿದ್ದಾರಂತೆ. ನಂಬ್ರವು ಹ್ಯಾಗಾದೀತೆಂದು ಈಗ ಹೇಳಲಾಗದು. ಬಾಯಿಬಾರದ ಕೂಸು ಸತ್ತುಹೋದುದರಿಂದ ಮೃತನನ್ನು ವಿಚಾರಿಸುವುದಕ್ಕಾಗಲಿಲ್ಲ. ಈ ಬಡಮಗುವಿಗೋಸ್ಕರ ನನ್ನ ಕಲ್ಲೆದೆಯು ಕೂಡಾ ಕರಗುತ್ತದೆ. ಮಗು! ನೀನು ಹುಲಿಯ ಹೊಟ್ಟೆಯಲ್ಲಿ ಹುಟ್ಟಬಾರದಿತ್ತೆ? ಕಂದಾ! ತಾಯಿಯು ನಿನ್ನನ್ನು ದಾರಿಗನ ಪಾಲುಮಾಡುವಾಗ ಯಾರಾದರೂ ನೋಡಲಿಕ್ಕೆ ಇರಲಿಲ್ಲವೇ? ಶಿಶುವೆ! ಹಂದಿಯು ಕೂಡಾ ಹೊರಳಾಡದ ಮುನಿಸಿಪಾಲ್ ರಸ್ತೆಯ ಮಳೆಕೆಸರಿನಲ್ಲಿ ನೀನು ಹ್ಯಾಗೆ ಮಲಗಿಬಿಟ್ಟೆಯೊ? ಉರುಳುವ ಗಾಡಿಗಳಿಗೆ ಜಖಂ ಆಗುವ ಮುನಿಸಿಪಾಲ್ ರಸ್ತೆಯು ನಿನ್ನ ಮರಣಶಯ್ಯೆಯಾಯಿತೇ? ನಮ್ಮ ಮುನಿಸಿಪಾಲ್ ಮಾರ್ಗಗಳ ಹಾಗೆ ನಿನ್ನನ್ನು ಯಾರೂ ಕೇಳದೆ ಹೋದರೇ? ನಿನ್ನನ್ನು ಬಟ್ಟೆಯ ಪಾಲು ಮಾಡಿದ ನಿನ್ನವರ

ಕುಲವೆ ಸಂಹಾರವಾಗುವ ಕಾಲ ಬಂತು—(ನಿನಗೆ)
ಇಳೆಯೊಳ್ ಬಾಳಿರುವಂಥ ಋಣವೆಲ್ಲಾ ಸಂತು ॥

## ನನ್ನ ಹಾಡು ಇದಲ್ಲ

ಮಳೆ ಸುರಿದಿಳೆಯಲ್ಲಿ ನೀರೆಲ್ಲಾ ನಿಂತು
ಮುಳುಗುವದ್ಯೆ ನಡೆವರ ಕಾಲ್ಗಳೆಂತು

ಹಂಪನ ಕಟ್ಟೆಯಿಂದ ಮಡಿಕೇರಿ ಗುಡ್ಡದವರೆಗೆ, ರಸ್ತೆ ಎಲ್ಲಾ ಹುಣ್ಣುಹುಣ್ಣಾಗಿ ಕೀವು ನಿಂತಿದೆ. ಸರದಾರರ ಗಾಡಿ ಹೋಗುವ ಈ ರಸ್ತೆಗೆ ಈ ಅವಸ್ಥೆ, ಮಿಕ್ಕ ಹಾದಿಗಳ ಗತಿ ಕೇಳವದೇನು? ಗಣಪತಿ ದೇವಸ್ಥಾನದ ರಸ್ತೆಯು ಗಣಪತಿ ದೇವಸ್ಥಾನದಂತೆ ಅಲ್ಲಲ್ಲಿ ದುರಸ್ತಾಗುತ್ತಿದೆ. ಮಾರ್ಕೆಟ್ ಬೀದಿಯು ಮಾರ್ಕೆಟಿನಂತೆ ಕೆಸರು ಕೊಳೆಯಾಗಿದೆ. ಮಳೆಕಾಲ ಮುಗಿಯುತ್ತಾ ಬಂತು; ಕೊಳೆಕಾಲ ಮಾತ್ರ ತಪ್ಪಲಿಲ್ಲ. ಈ ಬಿರುಮಳೆಗೆ ಉಳ್ಳಾಲ ಸೇತುವೆಗೆ ರೈಲ್ವೆಯವರು ಕಟ್ಟಿದ ಅಣೆಕಟ್ಟು ನಿಂತದ್ದು ಆಶ್ಚರ್ಯ. ಮಂಗಳೂರಿನಿಂದ ಉಡುಪಿಗೆ ರೈಲುಮಾರ್ಗವಾಗಲು ಸರ್ವೇ ಮಾಡುತ್ತಾರಂತೆ. ಇದು ನಿಜವೇ? ಸ್ವಾಮಿ, ಈ ಕಾಲದಲ್ಲಿ ಸತ್ಯ ವರ್ತಮಾನ ಯಾವದು; ಸುಳ್ಳು ಯಾವದೆಂದು ಹೇಳಲು ಬರುವುದಿಲ್ಲ. ಬಾಜಾರಿನಲ್ಲಿ ಬಣ್ಣ ಕಟ್ಟುವ ಬಣ್ಣಗಾರರು ಬೇಕುಬೇಕಾದ ಸುಳ್ಳು ವರ್ತಮಾನವನ್ನು ಹುಟ್ಟಿಸುತ್ತಾರೆ. ಇವರು ಶುದ್ಧಬ್ರಹ್ಮರು. ಇಲ್ಲದ್ದನ್ನು ಹುಟ್ಟಿಸುವರು. ಹುಟ್ಟಿದುದನ್ನು ಇಲ್ಲಸುವರು. ಇಲ್ಲಸುವೆಂಬ ಪದವು ಶುದ್ಧ ಕನ್ನಡವೇ? ಈಗ ಕನ್ನಡ ಮಾತಾಡುವವರ ಕನ್ನಡ ಅಚ್ಚಕನ್ನಡವೊ ತುಚ್ಛಗನ್ನಡವೊ? "ನಷ್ಟಸ್ತಂಭಕ" ಜನರೆಂದರೇನು? 'ಬಾಲಕರ ಗೀತಗಳಿಂದ ಜನರು ಅನುಮೋದಿಸಿದರು'—'ಅನುಮೋದಿಸು' ಎಂದರೆ ಸಂತೋಷಿಸು ಎಂದು ಯಾವ ಕೋಶದಲ್ಲಿದೆ? ಕನ್ನಡದಲ್ಲಿ ಪೂರ್ವದ ಹಳೆಗನ್ನಡ, ಹಳೆಗನ್ನಡ, ಹೊಸಗನ್ನಡ ಎಂಬ ಮೂರು ಬೇಧಗಳುಂಟೆಂದು ಮೆ. ರೈಸ್ ದೊರೆಗಳು ಹೇಳುತ್ತಾರೆ. ಕನ್ನಡದಲ್ಲಿ ಅಚ್ಚಗನ್ನಡ, ಉಚ್ಚಗನ್ನಡ, ತುಚ್ಛಗನ್ನಡ ಎಂಬ ಮೂರು ಬಗೆ ಎಂದು ಹರಟೆಮಲ್ಲ ಸಾಹೇಬರವರು ಹೇಳುತ್ತಾರೆ. "ಬ್ರೊಸುಗಳು ಮೆಟ್ರಿಕ್ಯುಲೇಶನ ಎಕ್ಸಾಮಿನಲ್ಲಿ ಫೈಲಾಗುವ ರೀಜನ್ ಏನೆಂದು ಎಷ್ಟೋ ಎಜ್ಯುಕೇಶನಿಸ್ತರ ಒಪಿನಿಯನ್ನುಗಳನ್ನು ನಾನು ಎಟ್ಟೆಂಟಿವ್ಲಿ ಓದಿದರೂ, ಐ ಎಮ್ ಅನೇಬಲ್ ಟು ಪ್ಯಾಂಟ್ ದಿ ಟ್ರುತ್" ಇದು ಉಚ್ಚಕನ್ನಡ. "ಶತಮಾನ ಕೋಶದಲ್ಲಿ ಪ್ರತ್ಯರ್ಥಗಳು ನಿದರ್ಶನಗಳಿಂದ ತತ್ಪರತೆಯಿಂದಲೂ ಸ್ಫುಟತೆಯಿಂದಲೂ ಪ್ರತಿರೂಪಿಸಲ್ಪಟ್ಟಿದೆ." ಇದು ತುಚ್ಛಕನ್ನಡ! ಕಚೇರಿ ಕನ್ನಡವೆಂದು ಮತ್ತೊಂದು ಜಾತಿಯುಂಟು; ಅದನ್ನು ಬರೆಯುವುದಕ್ಕೆ ಹಲವು ವರ್ಷ ಸಾಧನೆ ಮಾಡಬೇಕು. ಕೆಳಗಿನ ದೃಷ್ಟಾಂತವನ್ನು ನೋಡಿರಿ:— "ಮಂಗ್ಳೂರ ಶ್ಯಾರಿನಲ್ಲಿದ್ದ ಅ್ಯಕಸಾವ್ಕಾರ ನರ್ಸಯ ಕಮ್ತಿ ಯಾನೆ ನಾರಾಯಣ ರಾಯ್ರಿಗೆ ಚಾಲ್ಗೇಣಿ ವೊಕ್ಲುಕೆಲ್ಮಿ ಜಾತಿ ಸುಬ್ರಾ ಬಂಡಾರಿ ಬರ್ಸಿ ಕೊಟ್ಟ ಗೇಣ್ಚಿಟಿ ಕ್ರಮವೆಂತೆಂದ್ರೆ." ಹರಟೆಮಲ್ಲನ ಕನ್ನಡದಲ್ಲಿ ಇವು ಮೂರೂ ಸೇರಿವೆ.

ಅಪಾರ್ಥಮಕ್ರಮಂ ವ್ಯರ್ಥಂ ಪುನರುಕ್ತಂ ಹತೋಪಮಂ
ಲೋಕನ್ಯಾಯ ವಿರುದ್ಧಂತ ಮಲ್ಲನಾ ವಚನಂ ಇದು.

ಮಾತಿನಲ್ಲಿ ಏನಿದೆ? ಪ್ರೀತಿ ಇದ್ದರೆ ಸಾಕು. ನಾನು ಎಷ್ಟೊ ಮಾತು ಬೇಡಿದರೂ, ನಮ್ಮ ಪೋಲಿಸ ಸುಪರಿಂಟೆಂಡೆಂಟ್ ಮೆ. ಸಲಿವನ್ ದೊರೆಗಳು ನನ್ನ ಬಿನ್ನಹವನ್ನು ಮನ್ನಿಸಲಿಲ್ಲ. ಸತ್ಯದೀಪಿಕೆಯ ಒಂದೊಂದು ಪ್ರತಿಯನ್ನು ಸ್ಟೇಶನ್ ಹೌಸ ಆಫೀಸರರಿಗೆ ಸರಕಾರದ ಕಡೆಯಿಂದ ತರಿಸಿಕೊಟ್ಟರೆ ತುಂಬಾ ಕೃತಜ್ಞನಾಗುತ್ತಿದ್ದೆ. ಅವರು ವರ್ಗವಾಗಿ ಹೋಗಲಿಕ್ಕೆ ಇದ್ದಾರೆ. ನನ್ನ ಆ ಪತ್ರ ಅಲ್ಲೆ ಉಳಿಯಿತು. ಹೊಸ ದೊರೆಗಳಿಗೆ ನನ್ನ ಸಲಾಂ ಹೇಳುತ್ತೇನೆ. ಇವರು ಅವರ ಹಾಗೆಯೇ ಕೈಕೊಟ್ಟರೆ ಕೊಡಲಿ, ನೋಡಬೇಕೆಂದಿದ್ದೇನೆ—

ಅಧಿಕಾರ ಕಾಲದಲಿ। ಪಡೆದು ದಾನವ ಮಾಡು
ಪದವಕ್ಕು ಪರಿಣಾಮವಕ್ಕು ಸ್ವರ್ಗದಾ
ಮುದವೆ ತಾ ಬಕ್ಕು ಮಾನವಾ

— ೯ —

ಸ್ವಾಮಿೂ, ದೀಪಿಕಾ ಪತ್ರಕರ್ತರೇ!

ಇತ್ತಲಾಗಿ ನಾನು ದೇಶಸಂಚಾರಕ್ಕೆ ಹೊರಟದ್ದರಿಂದ ತಮಗೆ ಮೋರೆ ತೋರಿಸಲು ಆಗಲೇ ಇಲ್ಲ. ದೇಶಯಾತ್ರೆ ಮಾಡಿ ಕಳೆದ ಗುರುವಾರ ಸಾಯಂಕಾಲ ಮನೆಗೆ ಹಿಂತೆರಳಿದೆನು. ಬರುವಾಗ ಪೇಟೆಯಲ್ಲಿ ಜನಗಳು ಪತ್ರಿಕೆ ಪ್ರತಿಯನ್ನು ಕೈಕೊಂಡು ಅಧ್ಯಯನ ಮಾಡುವುದನ್ನು ನೋಡಿದೆನು. ಒಬ್ಬಿಬ್ಬರು "ಮಲ್ಲ ಇಲ್ಲ" ಎಂದು ತಲೆಯ ಮೇಲೆ ಕೈಮಾಡಿದರು. ಕ್ಷೌರಕ ಬಿರ್ಮ ಪೂಜಾರಿಯು ಮಲ್ಲನು ತಲೆತೋರಿಸಿದ್ದಾನೋ ಎಂದು ನೋಡಿದನು. ನಾನು ಇಲ್ಲದ್ದನ್ನು ನೋಡಿ ತಲೆ ಬೋಳಿಸದೆ ಸುಮ್ಮಗಾದನು. ಸೋಡಾ ಮಾರುವ ದಾಸಣ್ಣನು ಹರಟೆ ಓದುವ ತವಕದಿಂದ ಸೀಸೆಯಲ್ಲಿ ಲಿಂಬೆ ನೀರು ಹಾಕುವುದಕ್ಕೆ ಮರೆತು, ಚಂಬು ನೀರನ್ನು ತುಂಬಿಸಿಬಿಟ್ಟ. ರೊಟ್ಟಿಗಾರ ಪೇದ್ರು ಮಿಂಗೇಲನು ಗೋಧಿಯಿಲ್ಲದೆ ಆಗ ಬೋಟು ನಿರೀಕ್ಷಣೆಯಲ್ಲಿದ್ದನು. ಈಗಿನ ಗೋಧಿ ಹುಡಿಗೂ ಹಾದಿ ಹುಡಿಗೂ ಹೆಚ್ಚುಕಡಿಮೆ ಉಂಟೇ—ಎಂದು ಮನಸ್ಸಿನಲ್ಲಿ ಮಥಿಸುತ್ತಿದ್ದಾಗ, ಸತ್ಯದೀಪಿಕೆಯಲ್ಲಿ ಆಗ ಬೋಟುಬಂದ ವರ್ತಮಾನವನ್ನು ನೋಡಿ ದುಃಖಿಗೊಂಡನು. ಹೊಸ ಗೋಧಿ ಬರುವವರೆಗೆ ಪೇದ್ರು ಮಿಂಗೇಲರ ರೊಟ್ಟಿಯನ್ನು ಮೂಗುಹಿಡಿದು ತಿನ್ನಬೇಕಾಗಿತ್ತು. ಆದ್ದರಿಂದ ದೇಶಯಾತ್ರೆಗೆ ಹೊರಟೆನು. ಸ್ವಾಮಿ! ಮಲ್ಲನು ವಾರವಾರಕ್ಕೆ ತಲೆ ತೋರಿಸಬೇಕೆಂದು ಕೆಲವರ ಆಶೆ, ಮಲ್ಲನು ಕಲ್ಪಾಂತದ ವರೆಗೆ ಕಣ್ಣು ಮುಚ್ಚಿರಬೇಕೆಂದು ಕೆಲವರ ಭಾಷೆ. ಹಲವರು —ಮಲ್ಲನು ಕೆಲಸಕ್ಕೆ ಬಾರದ ಹಾಳು ಹರಟೆಗಳ ಗಾಳಿಊದಿ, ದೀಪಿಕೆಯ ಬೆಳಕನ್ನು ತೀರಾ ಆರಿಸಿಬಿಟ್ಟನೆಂದು ದೂಷಿಸುತ್ತಾರೆ. ಹಲವರು ಮಲ್ಲನು ನಾಲಗೆಯಿಂದ ತಿರುಗಣೆ ತಿರುಗಿಸಿ ದೀಪಿಕೆಯ ಪ್ರಕಾಶವನ್ನು ವಿಸ್ತರಿಸಿದನೆಂದು ಭೂಷಿಸುತ್ತಾರೆ.

ಇದ್ದ ಕಥೆಯು ತಾನೆದ್ದು ಹೇಳಿದರೆ
ಬುದ್ಧಜಾಲ ನೀನೆನ್ನುವರು॥

ಸದ್ದು ಮಾಡದೆಯೆ ಬಿದ್ದುಕೊಂಡರೂ
ಮೊದ್ದು ಮೂಕ ಜಂತುವೆನ್ನುವರು ॥

ಹರಟೆಮಲ್ಲನ ಚಾಕರಿ, ಮುನಿಸಿಪಾಲ ನೌಕರಿ, ಇವೆರಡು ಒಂದೇ ತರ. ಐದು ಬಾಯಿಗಳು ಹೊಗಳುತ್ತವೆ. ಹತ್ತು ಬಾಯಿಗಳು ಬೊಗಳುತ್ತವೆ. ರಾ.ರಾ.ನ. ಸುಬ್ಬರಾಯರು ಚೆಯರ್ಮೇನರಾದಂದಿನಿಂದ ಮುನಿಸಿಪಾಲ್ ಆಫೀಸು ಗಡಗಡನೆ ನಡುಗುತ್ತಿದೆ ಎಂದು ಹೇಳುವರು. ಬಡತನದಿಂದಲೇ ಎಂದು ತಿಳಿದುಕೊಳ್ಳುವಾ. ರಾ. ರಾ. ಸುಬ್ಬರಾಯರ ಕಾಲ ಹಿಂದೆ ಬಡತನ ಬಂತೊ? ಅವರ ಕಾಲದ ಹಿಂದೆ ಬಡತನ ವಿರಲಿಲ್ಲವೇ? ಮಾವಿನ ಮರಕ್ಕೆ ಬಂದಣಿಗೆ ಹಿಡಿದಂತೆ, ನಮ್ಮ ಮುನಿಸಿಪಾಲಿಟಿಗೆ ಕೆಲವು ವರ್ಷಗಳಿಂದ ಬಡತನ ಬಂದಿದೆ. ರಾ. ರಾ. ಸಾಲದಣ್ಣರು ಅಧ್ಯಕ್ಷರಾದರು. ಅವರ ಹೆಸರಿಗೆ ಸರಿಯಾಗಿ ಚೆಯರ್ಮೇನರು ಸಾಲದಣ್ಣರಾದರು. ಬಳಿಕ ಬಂದದ್ದು ರಾ. ರಾ. ಲಾಬರು; ಖಜಾನೆಯಲ್ಲಿ ನಿಂತದ್ದು ನಷ್ಟರು. ಈಗ ಸುಬ್ಬರಾಯರು ಏರಿದ್ದಾರೆ. ಶುಭವೊ, ಅಶುಭವೋ, ಇನ್ನು ನೋಡಬೇಕು. ಮುಖ್ಯವಾಗಿ ರಾ. ರಾ. ಸುಬ್ಬರಾಯರು ಬೇಡುವ ರಾಜ್ಯಕ್ಕೆ ಬೇತಾಳ ರಾಜನಾದಂತೆ ಆಗಿದ್ದಾರೆ ಎಂಬ ಹಾಗೆ ಆಗಬಾರದು. ರಸ್ತೆ ಸರಿಮಾಡುವುದಕ್ಕೆಂದು ಮಾರ್ಗದ ಬದಿಯಲ್ಲಿ ಜನರ ಕಣ್ಣಿಗೆ ಮಣ್ಣುಹಾಕಿದ್ದಾರೆ. ಬಾವಟೆ ಕಟ್ಟೆಯಲ್ಲಿ ಸರದಾರರ ಬಂಡಿ ಹರಿಯುವ ಮಾರ್ಗಗಳನ್ನು ನೆಲಸಮ ಮಾಡುವುದಕ್ಕೆ ಗುಡ್ಡಕ್ಕೆ ಮಣ್ಣುಹೊತ್ತದ್ದು ತೋರುತ್ತದೆ. ಮಳೆ ಕೈಬಿಟ್ಟದ್ದರಿಂದ ಮಣ್ಣಿನ ಬಾಯಿಗೆ ನೀರು ಎರೆಯುವವರನ್ನು ಕಾಣೆ. ಮಳೆ ಬೇಗನೆ ಜಾರಿತು. ಸುಗ್ಗಿ ಬೆಳೆಗಾಗಿ ಒಕ್ಕಲ ಬಾಯಿ ಆರಿತು. ಎಡಿಟರರೇ, ನಮ್ಮ ಜಿಲ್ಲೆಯ ಮಣ್ಣು ಒಳ್ಳೆದಲ್ಲವೆಂದು ಪರೀಕ್ಷೆ ಮಾಡಿದ್ದಾರೆ. ಎಷ್ಟು ನೀರು ಹೊಯಿದರೂ ನೀರು ಇಂಗುವುದಿಲ್ಲ. ಆದ್ದರಿಂದಲೇ ನಮ್ಮಲ್ಲಿ ಯಾವ ಸಂಘವಾದರೂ ಸಭೆಯಾದರೂ ಸರಿಯಾಗಿ ಬೆಳೆದು ಬಲಿಯುವುದಿಲ್ಲ. ಹಿಂದೆ ಕಲೆಕ್ಟರರಾದ ಮೆ. ರೈಸ ಸಾಹೇಬರು ಪ್ಲೇಗು ಸಭೆಗಳನ್ನು ಏರ್ಪಡಿಸಿದರು. ಒಂದೆರಡು ತಿಂಗಳುಗಳವರೆಗೆ ಎಲ್ಲಿ ನೋಡಿದರೂ ಸಾಹೇಬರ ಸುತ್ತುಮುತ್ತಲೂ ಸಭಿಕರ ಮುಂಡಾಸುಗಳು. ಸಾಹೇಬರು ಊರಿಂದ ಹೋದದ್ದೇ, ಮುಂಡಾಸುಗಳು ಅಗಸನ ಗುಡಾಣವನ್ನು, ಸೇರಿದವು. ಚಿರಕಾಲದಿಂದ ಈ ಜಿಲ್ಲೆಯಲ್ಲಿ ಒಂದು ರೈತರ ಸಂಘವಿತ್ತಂತೆ; ರಾ.ರಾ. ದಿವಾನ್ ಬಹದ್ದೂರ್ ಶಿವರಾಯರು ಅದರ ಅಧ್ಯಕ್ಷರಾಗಿದ್ದರಂತೆ. ಇದೆಲ್ಲಾ ಪೂರ್ವಕಥೆ ಎಂದು ಅಂತೆ, ಅಂತೆ ಎನ್ನುತ್ತೇನೆ. ಈ ಸಂಘಕ್ಕೆ ಹುಣ್ಣುರೋಗವಿದ್ದುದರಿಂದ, ಸಭಿಕರು ಯಾರೂ ದುರ್ವಾಸನೆಯ ಭೀತಿಯಿಂದ ಅದರ ಹತ್ತಿರ ಹೋಗುತ್ತಿರಲಿಲ್ಲ. ಮೆ. ಕಾಟ್ಸಾನ್ ಧೊರೆಗಳು ಹುಣ್ಣು ತೆರೆಯುವುದಕ್ಕೆ ತೀರ್ವೆ ಹಿಡಿದು ಶಸ್ತ್ರಪ್ರಯೋಗ ಮಾಡುತ್ತಲೇ, ಸಂಘವು ರಾ.ರಾ. ಶಿವರಾಯರನ್ನು ನೋಡಿ ಬಿಕ್ಕಿ ಬಿಕ್ಕಿ ಅಳತೊಡಗಿತು. ಎರಡು ಮೂರು ಸಲ ಮಿಲಾಗ್ರಿ ದೇವಾಲಯದ ಮುಂದೆ ಹೊರಳಿಬಂದು, ಕೈಕಾಲು ಜಾಡಿಸಿತು. ರಾ. ರಾ. ಶಿವರಾಯರು ಸ್ವರ್ಗಸ್ಥರಾಗುತ್ತಲೇ ಅವರ ಬೆನ್ನಹಿಂದೆಯೇ ಸಂಘವು ಸಹಗಮನ ಮಾಡಿಬಿಟ್ಟಿತು. ಪ್ರಜಾಹಿತೇಚ್ಛುಗಳಾದ ಇಂದಿನ ಕಲೆಕ್ಟರ ದೊರೆಗಳು ಕೃಷಿ ಸಂಘವನ್ನು ಏರ್ಪಡಿಸಿದ್ದಾರೆ. ಈ ಸಂಘವಾದರೂ ಚಿಗುರಿ, ಬೆಳೆದು, ಬಲಿತು, ಮರವಾಗಿ ಎಲ್ಲರಿಗೂ ಸೊಂಪಾದ ತಂಪಾದ ನೆರಳನ್ನು ಕೊಡಲಿ ಎಂದು ಬಡವನ ಪ್ರಾರ್ಥನೆ. ಒಟ್ಟು ಏನೆಂದರೆ—ಸಂಘ ಶಿಶು ಎತ್ತಿದವರ ಕೂಸಾಗಬಾರದು; ಹಾಗೆ ಆದದ್ದೇ ಆದರೆ, ಯಾರೂ ಅದನ್ನು ಎತ್ತಿಕೊಳ್ಳಲು ಬಾರರು. ಸರಕಾರದ ಮಗುವಿನ ಹಾಗಿರಲು ಬಾರದು. ಯಾಕೆಂದರೆ ಅದು ಕೈಕಾಲು ಬಂದು ಮುಂದೆ ನಡೆಯಲಿಕ್ಕೆ ಇಲ್ಲ. ಸಾಯಲಾರದ ಬಡತನಕ್ಕೆ ಬೇಸಾಯವೇ ನಿಕ್ಷೇಪ. ದೇಶದ ದಾರಿದ್ರ್ಯ ಸಂಕೋಲೆಯನ್ನು ಕಳಚಿ ಬಿಡುವುದಕ್ಕೆ ಇದೊಂದು ಉಪಾಯವಾಗಬಹುದು. ಬಂಗಾಳದ ಗೌಡರು ಈ

ವಿಷಯದಲ್ಲಿ ಗೌಡ ಬಂಗಾಳಿಯನ್ನು ಈಚೆಗೆ ಮಾಡತೊಡಗಿದ್ದಾರೆ. ಈ ಪುಣ್ಯಾತ್ಮರು ವಿಲಾಯತಿ ಬತ್ತಿ ಸೇದುವದನ್ನು ಬಿಟ್ಟು ಹಿಂದು ಭಂಗಿಯನ್ನು ಸೇವಿಸುತ್ತಾರಂತೆ. ಇಂಗ್ಲಿಷ್ ಬ್ರಾಂಡಿಯನ್ನು ವಿಸರ್ಜಿಸಿ ದೇಶೀಯ ಹೆಂಡ ಕುಡಿಯುತ್ತಾರಂತೆ. ಸರಕಾರದವರು ಬಂಗಾಲವನ್ನು ಎರಡು ತುಂಡುಗಳಾಗಿ ಕತ್ತರಿಸುತ್ತಾರೆಂದು ಇವರು ಸಿಟ್ಟಿಗೆದ್ದರು. ಇವರ ಕೋಪಾಗ್ನಿಗೆ ವಿಲಾಯತೀ ಬಟ್ಟೆಬರೆ ಸರಕು ಆಹುತಿಯಾಗಿದೆ. ನಾನು ಶುದ್ಧ ಮೂರ್ಖ! ಮನುಷ್ಯರು ಇಲ್ಲಿ ಯಾಕೆ ಬರುತ್ತಾರೆಂದು ತಿಳಿಯುವಷ್ಟು ಜ್ಞಾನವಿಲ್ಲ. ರಾ.ರಾ. ಹೇಮಚಂದ್ರ ಸರಕಾರ, ಎಮ್.ಎ. ಎಂಬವರು ವಿಲಾಯತೀ ಸರಕಿನ ಬಹಿಷ್ಕಾರ ಉಪದೇಶಿಸಲು ಕಳೆದ ೨೧ನೆಯ ತಾರೀಕಿಗೆ ಬಂದರೊ ಎಂದು ಮೊದಲು ತಿಳಿದು ಮೋಸಹೋದೆನು. ಕೊನೆಗೆ ಬ್ರಹ್ಮಧರ್ಮದ ಉದ್ಧಾರಮಾಡಲು ಬಂದರಲ್ಲದೆ ಸರಕನ್ನು ಬಹಿಷ್ಕಾರಮಾಡಲು ಬರಲಿಲ್ಲವೆಂದು ಮಂದಟ್ಟಾಯಿತು. ನಾನು ನಾಚಿಕೊಂಡೆನು. ಅವರ ಎದುರಿಗೆ ಹೋಗಲು ನನಗೆ ಮೋರೆಯಿಲ್ಲ. ಪುರಂದರದಾಸರು ಹಾಡಿದಂತೆ ಇವರು ಉಪದೇಶಮಾಡುತ್ತಿದ್ದಾರೆ.

> ಕಾಡು ದೈವಗಳನ್ನು ಚಿನ್ನಬೆಳ್ಳಿಗಳಿಂದ
> ಮಾಡಿಕೊಂಡದರ ಪೂಜೆಯನು ಮಾಡಿ ॥
> ಕಾಡು ಕಳ್ಳರು ಬಂದು ಅವುಗಳನು ಕೊಂಡೊಯ್ಯೆ
> ಮಾಡಿಕೊಂಡಿರ್ದುದಕ್ಕೆ ಬಾಯಿ ಬಡಕೊಳ್ಳೀ ॥

* * * *

ಮಾಜಿ ಧರ್ಮಸ್ಥಳದ ಪೆರ್ಗಡೆಯರಾದ ನಮ್ಮ ಮಂಜಪ್ಪ ಹೆಗ್ಗಡೆಯರು ನಮ್ಮ ಮಂಗಳೂರು ಮುನಿಸಿಪಾಲಿಟಿಯಲ್ಲಿರುವ ಗೋವುಗಳಿಗೆ ಅಲ್ಲಲ್ಲಿ ನೀರು ಸಿಕ್ಕುವಹಾಗೆ, ಸ್ವಲ್ಪ ಹಣವನ್ನು ಶೇಖರಿಸಿ ಅವರ ವಶಕ್ಕೆ ಕೊಟ್ಟಿದ್ದರಂತೆ. ಹಾಗೆಯೆ ರಾ.ರಾ. ಮಂಜೇಶ್ವರ ರಾಮಕೃಷ್ಣರಾಯರು ಬಾಲಕಿಯರ ಪಾಠಶಾಲೆಯ ಬಗ್ಗೆ ಸ್ವಲ್ಪ ಧನವನ್ನು ಮುನಿಸಿಪಾಲಿಟಿಯವರಿಗೆ ಕೃಷ್ಣಾರ್ಪಣೆ ಮಾಡಿದ್ದಾರಂತೆ. ಇವುಗಳ ಇತ್ಯರ್ಥವು ಇನ್ನೂ ಆಗಲಿಲ್ಲ. ಅದರಂತೆ ಹುಲಿಗಳ ಭಿನ್ನಹವನ್ನು ನೀವು ಮೂಲೆಗೆ ತಳ್ಳಬಾರದು. ಡೊಂಗರಕೇರಿಯಲ್ಲಿ ಗೋಕಲ್ಲು ಇಡುವದಕ್ಕೆ ಸಾಕಷ್ಟು ಹಣವನ್ನು ಕೌನ್ಸಿಲಿಗೆ ಕೊಟ್ಟ ಯಾರೋ ಪುಣ್ಯಾತ್ಮರು ಇನ್ನೂ ಕೃತಾರ್ಥರಾಗಲಿಲ್ಲ. ಇಂಥವರಿಗೆ ಏನು ಸಮಾಧಾನ ಹೇಳಬೇಕು? ಕೆಳಗಿನ ಶ್ಲೋಕವನ್ನು ಜಪಿಸಿ ಶೋಕವನ್ನು ಮರೆಯಲಿ.

> ಮೂಕ ಮುನ್ಸಿಪಾಲಿಟಿಗೆ ನೂರ್ಕಾಸು ಕೊಟ್ಟರು
> ಗೋಕಲ್ಲು ಕಟ್ಟೆಂದು ಬೇಡಿದರು,—ಅದು ತಾನು
> ನೀರ್ಕೊಂಬುದೇ ಸರ್ವಜ್ಞ ॥

ಸ್ವಾಮಿ! ಇವರೊಡನೆ ಕಾಡಿ ಬೇಡಿ ಬರೆಯುವುದಕ್ಕಿಂತಲೂ ತಮ್ಮ ಪ್ರತಿಕಾರಕ ಭಟರು ನನ್ನ ವಿಷಯವಾಗಿ ಬೇಕೆಂತಲೇ ಬರೆದಿದ್ದಾರೆ. ನನ್ನ ತಲೆಗೆ ಬಡಿದಂತೆ ಮಾಡಿ ನನ್ನ ಅಳು ಕೇಳುವುದಕ್ಕೆ ಈ ಮಹಾಶಯರಿಗೆ ಆನಂದ. ನನ್ನ ಹುಚ್ಚುಭಾಷೆ ಇವರಿಗೆ ಹೆಚ್ಚು ಆಶೆ. ಇನ್ನಾದರೂ ನನ್ನ ಬೊಗಳನ್ನು ಕೇಳಿ ಇವರು ನಿದ್ದೆಹೋಗಲಿ. ತಲೆ ಇಲ್ಲದಿದ್ದರೆ, ತಲೆಗೆ ಏಟು ಬೀಳುತ್ತದೆ. ಇದು ನಿಜ. ಇವರಿಗೂ ಹಾಗೆಯೆ. ನನ್ನ ಮಾತನ್ನು

ಕೇಳಿ ಕೇಳಿ ಇವರು ಸಕ್ಕರೆ ಹಾಲು ಕುಡಿಯಲಿ! ಇವರು ಹಿಂದೆ ಮಾತಾಡಿದ ವಿಷಯವನ್ನು ಬೇಕೆಂತ ತಿಳಿಯುವ ಹಾಗೆ ನಟಿಸಿ, ನನ್ನ ವಿಷಯವಾಗಿ ಬಂಗಾಳಿಯವರಿಗೆ ದೂರು ಹಚ್ಚುತ್ತಾರಂತೆ. ನಾನು ಅಡಿಯಿಂದ ಮುಡಿವರೆಗೆ ಸ್ವದೇಶಿ. ಆದ್ದರಿಂದ ಮದ್ರಾಸ್ ಸರಕಾರಕ್ಕೆ ಬರೆದು ಸ್ವದೇಶಿ ಕಲೆಕ್ಟರರನ್ನು ಇಲ್ಲಿಗೆ ಬರಮಾಡಿಸಿದ್ದೇನೆ. ಸರಕಾರವು ನಮ್ಮ ಜಿಲ್ಲೆಗೆ ಸ್ವದೇಶಿ ಸರ್ಜನರನ್ನು ಸ್ವದೇಶಿ ರಿಜಿಸ್ಟ್ರಾರರನ್ನು ಕೊಟ್ಟಿದ್ದಾರೆ. ಹೀಗೆಂದ ಮೇಲೆ ಸರಕಾರವು ಸ್ವದೇಶಿಯಲ್ಲವೆಂದು ಹ್ಯಾಗೆ ಹೇಳಬಹುದು? ನಮ್ಮ ದೊಡ್ಡ ಹುದ್ದೆದಾರರು ಎಲ್ಲಾ ಕೆಲಸಗಳನ್ನು ತಾವೇ ನೋಡಿಕೊಳ್ಳುತ್ತಾರಂತೆ.—ಕಲೆಕ್ಟರರು ಪ್ಲೇಗು ಸೋಂಕು ತಟ್ಟದಂತೆ ಉಡಿಪಿಯ ಪರಿಯಾಯಕ್ಕೆ ಯಾತ್ರಿಕರು ಬಾರದ ಹಾಗೆ ಮಾಡಿದ್ದು ಲೇಸು. ಆದರೆ ಮಠದ ಭೋಜನಶಾಲೆಯ ಗಾಳಿಯು ಹೊರಗೆ ಬೀಸದ ಹಾಗೆ ಮಾಡಲೆಂದು ಬಡವನ ಅರಿಕೆ. ಭೋಜನ ಶಾಲೆಯ ಪಂಕಜ ರಜಃಪೂರಿತ ಗಾಳಿಯಲ್ಲಿದ್ದು ಪ್ರಸಾದವನ್ನು ಭುಂಜಿಸಿದವರಿಗೆ ಸಾಯುಜ್ಯವೊ? ಸಾಮಿಪ್ಯವೊ? ಹೇಳಬರುವುದಿಲ್ಲ. ಪರ್ಯಾಯಕ್ಕೆ ಬಂದಿದ್ದ ಬಡ ಮುದುಕಿಯು ಜನಸ್ತೋಮದ ಚರಣಹತಳಾಗಿ ವೈಕುಂಠವನ್ನು ಸೇರಿದಳಂತೆ. ಒಂದು ಸಾಯುವಾಗ ಮತ್ತೊಂದು ಹುಟ್ಟುತ್ತದೆ. ಇದು ಲೋಕಧರ್ಮ. ಪರ್ಯಾಯದಲ್ಲಿ ಮುದುಕಿ ಸತ್ತಿತು. ಶ್ರೀಕೃಷ್ಣಸೂಕ್ತಿ ಹುಟ್ಟಿತು. ರಾ.ರಾ. ಕರೋಡಿ ಸುಬ್ಬರಾಯರ ಮಗುವಿನ ಜನನಕಾಲವೂ ಸುಕಾಲವೇ ಸರಿ! ನಾನು ಮಗುವನ್ನು ಎತ್ತಿನೋಡಲಿಲ್ಲ. ಹುಟ್ಟಿದ ಕೂಸನ್ನು ಕೆಲವು ತಿಂಗಳುಗಳವರೆಗೆ ಮುಟ್ಟುವುದಕ್ಕೆ ನನಗೆ ಹೊಟ್ಟೆತೊಳಸುತ್ತದೆ. ರೂಪಲಾವಣ್ಯ ಸಾಕಷ್ಟು ಇದೆ. ಮಾತು ಚಲೋದಿದೆ! ಹುಟ್ಟಿದಾಗಲೆ ಶ್ಲೋಕರೂಪವಾಗಿ ಮಾತಾಡುತ್ತಿದೆ. ಮಗು! ನಿನಗೆ ಚಿರಾಯುಷ್ಯವಿರಲಿ! ಶಿಶು! ನಿನಗೆ ಮಾರ್ಕಾಂಡೇಯ ಆಯುಷ್ಯವಾಗಲಿ! ಕೂಸು! ನೀನು ಹಿಮಾಚಲವಿರುವಷ್ಟು ಕಾಲ ಬದುಕಿ ಬಾಳು!

---

# ಹಲ್ಲಿ

(ಸತ್ಯದೀಪಿಕೆ)

ನಮ್ಮ ಮನೆಗೆ ದಿನಂಪ್ರತಿ ಬರುವ ಸ್ನೇಹಿತರಲ್ಲಿ ಹಲ್ಲಿಯು ಒಂದು. ಇರುಳು ನಾನು ಬೆಳಕನ್ನು ಇಟ್ಟು ಓದಲು ಕುಳ್ಳಿರುವಾಗ, ಹಲ್ಲಿಯು ಪ್ರತಿರಾತ್ರಿ ನನ್ನ ಭೇಟಿಗೆ ಬಾರದೇ ಇರುವುದಿಲ್ಲ. ಹಲ್ಲಿಗಳಿಗೆ ಮನೆಗಳೆಂದರೆ ಪ್ರೀತಿ. ಅವು ಪೂರ್ವಕಾಲದ ಸೇವಕರಂತೆ ಒಂದು ಮನೆಯಲ್ಲಿ ನಿಂತರೆ, ಅದನ್ನು ಬಿಟ್ಟು ಹೋಗುವುದಿಲ್ಲ. ಆದ್ದರಿಂದಲೇ ಇದನ್ನು ಸಂಸ್ಕೃತದಲ್ಲಿ 'ಗ್ರಹಗೋಧಿಕೆ' ಎಂದು ಕರೆಯುವರು. ಹಲ್ಲಿಯು ದೊಡ್ಡಮನೆತನಕ್ಕೆ ಸೇರಿದ್ದು. ಮೊಸಳೆ, ಉಡು ಮತ್ತು ಹಲ್ಲಿ ಅಕ್ಕತಂಗಿಯರು. ಇವು ಮನೆಮಾಡಿಕೊಳ್ಳಲು ಎಲ್ಲವನ್ನು ಒದಗಿಸಿಕೊಂಡು ಮೊಸಳೆಯು ನೀರು ತರುವುದಕ್ಕೆ ಕಡಲಿಗೂ, ಉಡು ಕಟ್ಟಿಗೆ ಕಡಿಯುವುದಕ್ಕೆ ಕಾಡಿಗೂ, ಹಲ್ಲಿಯು ಬೆಂಕಿ ಉರಿಸುವುದಕ್ಕೆ ನಾಡಿಗೂ ಹೋದುವಂತೆ. ಅಷ್ಟರೊಳಗೆ ಕಲಿಕಾಲವು ಕಾಲು ಹಾಕಿದ್ದರಿಂದ, ಹೋದವರು ಅಲ್ಲಲ್ಲೆ ಉಳಕೊಳ್ಳಬೇಕಾಯಿತೆಂದು ನಮ್ಮ ಮುದಿಹೆಂಗಸರು ಆಡಿಕೊಳ್ಳು ವುದುಂಟು. ಕಂಡವರ ನೆತ್ತರನ್ನು ಹೀರಿಕೊಳ್ಳುವಂತೆ, ಜನಗಳನ್ನು ನೋಡುತ್ತಲೇ ತಲೆಎತ್ತಿ ಕೆಂಪೇರುವ ಓತಿಯು, ಅತ್ತಿತ್ತ ಅಡ್ಡಾಡುವ ಹಾವುರಾಣಿಯು—ಇವುಗಳಿಗೆ ದೂರದ ತಮ್ಮಂದಿರಾಗಬೇಕು. ಮನೆತನದ ಆಸ್ತಿಯೆಲ್ಲಾ ಹೆಣ್ಣುಮಕ್ಕಳ ಪಾಲಾದ್ದರಿಂದ, ಈ ಓತಿಯು ಹಿತ್ತಲಿಂದ ಹಿತ್ತಲಿಗೆ ಓಡಾಡುತ್ತ ಕಂಡವರು ಎಸೆದ ಕಲ್ಲುಗಳಿಗೆ ತಲೆಕೊಟ್ಟು ಸಾಯುತ್ತಿದೆ.

ಹಲ್ಲಿಯ ವಿಷಯವಾಗಿ ಹುಡುಗರು ಇಂಥಾ ಅತ್ಯಾಚಾರವನ್ನು ನಡೆಸುವುದಿಲ್ಲ. ನಮ್ಮ ಪೂರ್ವಿಕರು ಹಲ್ಲಿಯನ್ನು ಜೋಯಿಸನೆಂದು ಭಾವಿಸುತ್ತಿದ್ದರು. ಗೌಳಿಯ ಚರ್ಯೆಚೇಷ್ಟೆಗಳನ್ನು ನೋಡಿ ತಮ್ಮ ಕಾರ್ಯ ಗಳನ್ನು ಕೈಕೊಳ್ಳುತ್ತಿದ್ದರು. ಪಯಣ ಹೊರಡುವಾಗ ಹಲ್ಲಿಯು ಚೀರಿದರೆ ಪಯಣವನ್ನು ನಿಲ್ಲಿಸಿಬಿಡುವರು. ಗಂಡಸಿನ ತಲೆಯ ಮೇಲೆ ಬಿದ್ದರೆ ಮರಣವು ಸಿದ್ಧ; ಹೆಂಗಸಿನ ಹೆಗಲ ಮೇಲೆ ಬಿದ್ದರೆ, ಬೊಟ್ಟಿನ ಕುಂಕುಮ ಉಳಿಯದು. ಇವನ್ನೆಲ್ಲಾ ಹೇಳಿತೀರದು. ಹಲ್ಲಿಶಕುನ ಎಂಬ ಹೆಸರಿನ ಅನೇಕ ಪುಸ್ತಕಗಳು ಹಲ್ಲಿಯ ಮಹಾತ್ಮೆ ಯನ್ನೂ ಅದರ ಮೇಲೆ ಜನಗಳಿಗಿರುವ ಮೂಢವಿಶ್ವಾಸಗಳನ್ನೂ ತೋರಿಸುತ್ತವೆ. ಬೇಕಾದವರು ಅಂಥ ಪುಸ್ತಕಗಳನ್ನು ಓದಿ ಓದಿ ತಲೆ ಮರಳುಮಾಡಿಕೊಳ್ಳಬಹುದು.

ಹಿಂದುಗಳು ಹಲ್ಲಿಯನ್ನು ಇಂಥಾ ಮೂಢಭಕ್ತಿಯಿಂದ ದುರ್ಗಾದೇವಿಯಂತೆ ಭಾವಿಸಿದರೂ, ದುರ್ಗೆ ಯಂತೆ ಇದಕ್ಕೆ ಎಂಟು ಕೈಗಳೂ ಇಲ್ಲ; ಭೀಕರ ಮುಖವೂ ಇಲ್ಲ. ಆದರೂ ಹಲ್ಲಿಯು ತನ್ನ ನಾಲ್ಕು ಕಾಲು ಗಳಿಂದ ನಯವಾದ ಗೋಡೆಯನ್ನು ಹ್ಯಾಗೆ ಹತ್ತುತ್ತದೆಂಬುದು ಆಶ್ಚರ್ಯವಾಗಿದೆ. ಸಾವಿರ ವರ್ಷ ಗರಡೀ ಸಾಧಕ ಮಾಡಿದ ಜಟ್ಟಿಯು ಮನೆ ಅಜ್ಜಿಯ ಸೊಂಟ ಮುರಿದಾನಲ್ಲದೆ ಇಂಥಾ ಅಸಾಧ್ಯ ಕೃತ್ಯವನ್ನು ಮಾಡಲಾರನು. ಇದರ ಗುಟ್ಟನ್ನು ಅರಿಯ ಬೇಕೆಂದಿರುವವರು ಹಲ್ಲಿಯ ಕಾಲು ಹಿಡಿಯಬೇಕು; ಆಗ ತಾನೆ ತಿಳಿದೀತು. ಆದರೆ ಹಲ್ಲಿಯು ನಮ್ಮ ಕುಲಸ್ತ್ರೀಯಂತೆ ಮಂದಮತಿಯಲ್ಲ, ಅದರ ಕಾಲುಗಳನ್ನು ಹಿಡಿಯಲು

ಯತ್ನಿಸುವಾಗ, ನಿಮ್ಮ ಗುರಿ ತಪ್ಪಿ ಅದರ ಕಾಲು ಸಿಗದೆ ಬಾಲಕ್ಕೆ ಕೈಬೀಳುವುದು. ಜೀವದಾಸೆಯಿಂದ ಓಡುವ ತುರುಕನು ತಲೆಯ ಟೊಪ್ಪಿ ಕೊಟ್ಟು ಮೈತಪ್ಪಿಸಿಕೊಳ್ಳುವಂತೆ, ಹಲ್ಲಿಯು ಬಾಲವನ್ನು ನಮ್ಮ ಕೈಯಲ್ಲಿ ಬಿಟ್ಟು ಜೀವ ಕಟ್ಟಿಕೊಂಡು ಓಡುವುದು. ಕಾಲುಗಳನ್ನು ಹಿಡಿದು ನೋಡಿದರೆ ಒಂದೊಂದು ಕಾಲಿನಲ್ಲಿ ಐದೈದು ಕಿರಿ ಬೆರಳುಗಳು ಕಾಣಿಸುತ್ತವೆ. ಈ ಚಿಕ್ಕಬೆರಳುಗಳ ತುದಿಗಳಲ್ಲಿ ಮೊನಚಾದ ಕೂರುಗುರುಗಳಿವೆ. ಈ ಉಗುರುಗಳನ್ನು ಹಲ್ಲಿಯು ಬೆಕ್ಕಿನಂತೆ ಪಾದದ ಒಳಗೆ ಎಳೆದುಕೊಳ್ಳಬಹುದು. ಉಗುರುಗಳ ತುದಿಗಳು ಬಲು ಹದವಾಗಿಯೂ ಮೊನಚಾಗಿಯೂ ತೆಳುವಾಗಿಯೂ ಇರುವುದರಿಂದ ನಮ್ಮ ಕಣ್ಣಿಗೆ ಅತಿ ನುಣುಪಾಗಿ ತೋರುವ ಸುಣ್ಣಬಳೆದ ಗೋಡೆಯಾದರೂ ಸಾವಿರಾರು ಚಿಕ್ಕ ಚಿಕ್ಕ ಹೊಂಡಗಳಿರುವ ಅಂಗಳದಂತೆ ಕರಕ ಲಾಗಿದ್ದು, ಉಗುರುಗಳಿಂದ ಒತ್ತಿಹಿಡಿಯುವುದಕ್ಕೆ ಅವಕಾಶವನ್ನು ಕೊಡುವುದು. ಒಂದು ವೇಳೆ ಕಾಲು ಜಾರಿದರೆ, ಕೆಳಕ್ಕೆ ಬೀಳದಹಾಗೆ ಗೋಡೆಯನ್ನು ಅಂಟಿಕೊಳ್ಳಲು ಹಲ್ಲಿಯು ಇನ್ನೊಂದು ಉಪಾಯವನ್ನು ಮಾಡುತ್ತಿದೆ. ಮಕ್ಕಳು ಪಂಚಪಾತ್ರೆಯನ್ನು ಬಾಯಿಯ ಬಳಿಯಲ್ಲಿ ಅಮುಕಿ ಹಿಡಿದು ಒಳಗಿನ ಗಾಳಿಯನ್ನು ಸೇದಿಕೊಂಡು ಪಾತ್ರೆಯನ್ನು ಬಿಗಿಹಿಡಿದು ಆಡುವುದನ್ನು ನಾವು ನೋಡುತ್ತೇವೆ. ಕರಡಿಗೆಯೊಳಗಿನ ಗಾಳಿ ಯನ್ನು ಯಂತ್ರದ ಮೂಲಕವಾಗಿ ಪೂರಾ ತೆಗೆದುಬಿಟ್ಟರೆ, ಮುಚ್ಚಳವನ್ನು ತೆಗೆಯಬೇಕಾದರೆ, ಹಲವು ಜನಗಳು ಇಕ್ಕಡೆಯಿಂದ ಎಳೆದರೂ ಕರಡಿಗೆಯು ಬಾಯಿ ಬಿಡಲಾರದು. ಹಲ್ಲಿಗೆ ಪಾದದ ಕೆಳಕ್ಕೆ ಸಿಂಬಿ ಯಂತಿದೆ. ಹಲ್ಲಿಯು ಈ ದುಂಡಗಾದ ಸಿಂಬಿಯನ್ನು ಗೋಡೆಗೆ ಒತ್ತಿಟ್ಟು ಅದರ ಕೇಂದ್ರವನ್ನು ಮೇಲಕ್ಕೆ ಎಳೆದು ಬಿಡುತ್ತಲೆ, ಗೋಡೆಗೂ ಸಿಂಬಿಗೂ ನಡುವಿನಲ್ಲಿದ್ದ ಗಾಳಿಯು ಹೋಗಿಬಿಡುತ್ತದೆ. ಆಗ ಸಿಂಬಿಯು, ಮಗುವಿನ ಮೋರೆಯಲ್ಲಿ ಪಂಚಪಾತ್ರೆಯು ಅಂಟಿಕೊಳ್ಳುವಂತೆ, ಗೋಡೆಯನ್ನು ಬಿಗಿಹಿಡಿಯುತ್ತದೆ. ಮಗುವು ಒಳಗಿನಿಂದ ಉಸಿರುಬಿಡುತ್ತಲೇ ಪಾತ್ರೆಯು ಬೀಳುವ ಹಾಗೆ ಹಲ್ಲಿಯು ಸಿಂಬಿಯ ಕೇಂದ್ರವನ್ನು ತನಗೆ ಬೇಕಾದಾಗ ಸಡಿಲಿಸಿ ಬಿಟ್ಟು ಮುಂದರಿಸುತ್ತದೆ. ಓಡುವಾಗ ಕಾಲುಗಳ ಹಿಡಿತಕ್ಕೆ ಅನುಕೂಲವಾಗು ವಂತೆ ಮೈಯನ್ನು ತಿರುವುಮುರುವು ಮಾಡಿ ಸರಾಗವಾಗಿ ಹೋಗುತ್ತದೆ. ಚುಕ್ಕಾಣಿಯು ದೋಣಿಯನ್ನು ಬೇಕಾದ ಕಡೆಗೆ ತಿರುಗಿಸುವಂತೆ ಬಾಲವು ಹಲ್ಲಿಗೆ ಓಡಾಟದಲ್ಲಿ ಸಹಾಯವಾಗುತ್ತದೆ.

ಹಲ್ಲಿಯ ಆಟವನ್ನು ಇರುಳು ನೋಡಬೇಕು. ಅದು ನಮ್ಮ ನಾಟಕದ ವೇಷಗಾರರಂತೆ ಹಗಲೆಲ್ಲ ಕತ್ತಲು ಮೂಲೆಯಲ್ಲಿ ಅವಿತುಕೊಂಡು ನಿದ್ದೆಮಾಡಿ, ದೀಪ ಹಚ್ಚುತ್ತಲೇ ರಂಗಭೂಮಿಗೆ ಇಳಿಯುತ್ತದೆ. ಶಲಭವಧೆಯಲ್ಲಿ ಮುಖ್ಯಪಾತ್ರವು ಮುಸಲಿಯೆ. ಮೊತ್ತಮೊದಲು ಮುಸಲಿಯು ಧ್ಯಾನಾರೂಢನಾದಂತೆ ನಿಶ್ಚಲಿತವಾಗಿದ್ದು ಸುತ್ತಲೂ ಹರಿದು ಹಾರಿ ಪ್ರಪಂಚಕ್ಕೆ ಬಾಧೆಯನ್ನುಂಟುಮಾಡುವ ಸಾವಿರಾರು ಶಲಭಾ ಸುರರನ್ನು ತಲೆಯಲ್ಲಿ ಕೆತ್ತಿದಂತಿರುವ ದೊಡ್ಡದಾದ ಅಲುಗು ಕಣ್ಣುಗಳಿಂದ ಹೊಂಚಿ ನೋಡುವುದು. ಮುಸಲಿಗೆ ನಮ್ಮಹಾಗೆ ಕಿವಿಯಿಲ್ಲದಿದ್ದರೂ, ಕಣ್ಣುಗಳ ಹಿಂದುಗಡೆಯಲ್ಲಿ ಎರಡು ರಂಧ್ರಗಳಿವೆ. ಇವುಗಳ ಮೂಲಕವಾಗಿ ಹಲ್ಲಿಗೆ ತುಸು ಸದ್ದಾದರೂ ಕೇಳಿಸುತ್ತದೆ. ಕೂಡಲೇ ಮುಸಲಿಯು ಕತ್ತನ್ನು ನೀಡಿ ಕಣ್ಣನ್ನು ಕೆರಳಿಸಿ ಬಾಯನ್ನು ಅಗಲಿಸಿ ಬಿರ್ರೆಂದು ಮಂಡಳಿಸುತ್ತಲಿರುವ ಶಲಭಗಳ ಮೇಲೆ ಧೀಂಕಿಟ್ಟು ಅವನ್ನು ಸಂಹಾರಮಾಡುವುದು. ಬಳಿಕ ತನ್ನ ತಲೆಗಿಂತಲೂ ಗಾತ್ರವಾಗಿರುವ ಹುಳಗಳನ್ನು ಆದರೂ ಸರಿಯೆ ತುತ್ತು ತುತ್ತಾಗಿ ನುಂಗಿಬಿಡುವುದು.

ಹಲ್ಲಿಯು ಸತ್ತಹುಳುಗಳನ್ನು ಮುಟ್ಟದು; ಅದು ಕ್ರಿಮಿಕೀಟಗಳನ್ನೇ ಕೊಂದು ತಿನ್ನುವುದು. ಈ ಕೃತ್ಯವು ಮಹಾಹಿಂಸೆ ಎಂದು ತೋರಬಹುದಾದರೂ, ಹಲ್ಲಿಯು ಹೀಗೆ ಹುಳಗಳನ್ನು ಸಂಹರಿಸದಿದ್ದರೆ,

ಕೀಟದ ಕಾಟವು ಮನೆಯಲ್ಲಿ ಎಷ್ಟಾಗುತ್ತಿತ್ತೋ, ಹೇಳಬರುವುದಿಲ್ಲ. ಹಲ್ಲಿಯು ವಿಷಕರ ಜಂತುವೆಂದೂ ಅದರ ಉಚ್ಛಿಷ್ಟವು ಮರಣಕರವೆಂದೂ ಹೇಳುವ ಮಾತು ಸುಳ್ಳಾಗಿದೆ. ಅದು ಆಕಾರದಲ್ಲಿ ಕುರೂಪಿಯೆಂಬು ದೇನೋ ನಿಜ. ಅದರ ಮಸುಕಾದ ಬಣ್ಣ, ವಿಕಾರವಾದ ತಲೆ, ತಣ್ಣಗಾದ ಮೈ, ಇವುಗಳಿಂದ ಹಲ್ಲಿಯು ಜನಗಳಿಗೆ ಅಷ್ಟು ಪ್ರೀತಿಪಾತ್ರವಾಗಿಲ್ಲ. ಅದರಲ್ಲಿ ಒಂದು ದುರ್ಗುಣವಿದೆ. ಹಲ್ಲಿಯು ಸುಮ್ಮನೆ ಬಿದ್ದು ಕೊಂಡಿರುವಾಗ ಕೂಡಾ ಏನನ್ನೊ ನುಂಗುವಂತೆ ಬಾಯಿಂದ ಮುಕ್ಕುತ್ತಿರುವ ದುರಭ್ಯಾಸವೂ ಅದಕ್ಕುಂಟು. ಇದರಲ್ಲಿ ವಿಚಿತ್ರವೇನೂ ಇಲ್ಲ. ನಾವು ಉಸಿರು ಸೇದಿಕೊಳ್ಳುವಾಗ ಹೀಗೆಯೆ ಮಾಡುತ್ತೇವೆ. ಹೊರಗಣ ವಾಯುವನ್ನು ನಾವು ಸೊಳ್ಳೆಗಳ ಅಥವಾ ಬಾಯಿಯ ಮೂಲಕ ಸೇದಿಕೊಳ್ಳುತ್ತಲೇ ಗಾಳಿಯು ಒಳಗಿನ ಶ್ವಾಸಕೋಶಗಳಲ್ಲಿ ಸೇರಿ ಎದೆಯು ಉಬ್ಬೇರುತ್ತದೆ. ಗಾಳಿಯನ್ನು ಸೇದಿ ಹೊರಬಿಡುವಾಗ ಎದೆಯು ಮುದುಡಿಕೊಳ್ಳುತ್ತದೆ. ಹಲ್ಲಿಗೆ ಪಕ್ಕೆಲಬುಗಳು ಇಲ್ಲದಿದ್ದುದರಿಂದ, ನಮ್ಮಹಾಗೆ ಪುಪ್ಫುಸಗಳನ್ನು ಉಬ್ಬಿಸ ಲಾರದೆ ಗಾಳಿಯನ್ನು ಗುಟುಕು ಗುಟುಕಾಗಿ ಹೀರುತ್ತದೆ. ಹಲ್ಲಿಯು ಬಾಯಿಯನ್ನು ಮುಚ್ಚಿಕೊಂಡು ಸೊಳ್ಳೆಗಳ ಮೂಲಕವಾಗಿ ಗಾಳಿಯನ್ನು ಸೇದಿಕೊಂಡು ಒಂದೊಂದೇ ಗುಟುಕನ್ನು ಕೆಳಕ್ಕೆ ತಳ್ಳಿಬಿಡುತ್ತದೆ. ಇಷ್ಟು ಪ್ರಯತ್ನಪಟ್ಟರೂ ಅದು ಒಳಕೊಳ್ಳುವ ಗಾಳಿಯು ಅದರ ನೆತ್ತರನ್ನು ಬಿಸಿಮಾಡಲು ಸಾಕಾಗುವು ದಿಲ್ಲ. ನಮ್ಮ ನೆತ್ತರು ಬೆಚ್ಚಗಿರಲು ನಾವು ಉಸಿರಾಡುವುದೇ ಕಾರಣವಾಗಿದೆ. ನಾವು ಎತ್ತರವಾದ ಗುಡ್ಡ ವನ್ನು ಹತ್ತುವಾಗ ಉಸಿರಾಡುವುದು ಹೆಚ್ಚಾಗಿ, ಒಲೆಯ ಮೇಲಿಟ್ಟ ನೀರಿನಂತೆ ಮೈಯನೆತ್ತರು ಬೆಚ್ಚ ನಾಗುವುದು. ಹಲ್ಲಿಯು ಎಳಕೊಳ್ಳುವ ಗಾಳಿಯು ಅದರ ಜೀವನಾಧಾರಕ್ಕೆ ಮಾತ್ರ ಸಾಲುವುದಲ್ಲದೆ ಅದರ ತಣ್ಣಗಾದ ನೆತ್ತರನ್ನು ಬೆಚ್ಚಗಾಗಿಸಲು ಸಾಕಾಗುವುದಿಲ್ಲ.

---

# ಪ್ರಾಣಿಗಳೂ ಪ್ರದೇಶಗಳೂ*

## ಉಷ್ಣಪ್ರದೇಶಗಳಲ್ಲಿಯ ಅರಣ್ಯಪ್ರಾಣಿಗಳು

### ೧ ನೆಯ ಅಧ್ಯಾಯ

### ವಿಚಿತ್ರ ಭೂಗೋಲ

ಸರ್ಕಸ್ ಎಂದರೆ ಏನೆಂದು ನೀವು ಕೇಳಿರಬಹುದು. "ಸರ್ಕಸ್ ನೋಟ! ಕುದುರೆಯ ಓಟ! ಹುಲಿಗಳ ಊಟ!" ಎಂದು ಕೂಗುತ್ತಾ ಬೀದಿ ಬೀದಿಗಳಲ್ಲಿ ಡಂಗುರ ಸಾರಿ ಸರ್ಕಸ್ಸಿನವರು ಕಾಗದಗಳನ್ನು ಹಂಚುವಾಗ, ನೀವು ಓಡಾಡಿರಬಹುದು. ಆ ಪ್ರಕಟಣೆಯ ಕಾಗದಗಳನ್ನು ಓದಿ, ಸರ್ಕಸ್ ಆಟ ನೋಡುವುದಕ್ಕೆ ಜನರು ಗುಂಪುಗುಂಪಾಗಿ ಹೋಗುವುದುಂಟು. ಸರ್ಕಸಿನಲ್ಲಿ ಕುಸ್ತಿಯವರು ಕುಸ್ತಿ ಮಾಡುವರು; ಮೃಗಗಳು ವಿಚಿತ್ರವಾದ ಆಟ ಆಡುವುವು.

ಏನು ತಮಾಷೆ! ಆನೆಯ ಮರಿ ಪೀಪಾಯಿಯ ಮೇಲೆ ನಿಂತುಕೊಂಡು ಅದನ್ನು ಎಷ್ಟು ಚಮತ್ಕಾರವಾಗಿ ಉರುಳಿಸುತ್ತದೆ! ಅಬ್ಬ ಹುಲಿ ನೀರು ಕುಡಿಯುವ ತೊಟ್ಟಿಯಲ್ಲಿ ಆಡುಗಳು ಬಾಯಿಹಾಕಿ ನಿರ್ಭಯವಾಗಿ ನೀರು ಕುಡಿಯುತ್ತವೆ! ಅರರೇ! ದೊಡ್ಡ ಸಿಂಹಗಳು ನಾಯಿಮರಿಗಳ ಹಾಗೆ ಯಜಮಾನನ ಅಪ್ಪಣೆ ಕೇಳಿ, ಭುಗ್ಗೆಂದು ಉರಿಯುವ ಅಗ್ನಿಚಕ್ರದ ನಡುವಿನಿಂದ ಹೆದರದೆ ಹಾರಿಹೋಗುತ್ತವೆ! ಇದನ್ನು ಕಂಡು ನೀವು ಬೆರಗಾಗಬಹುದು. ಈ ತಮಾಷೆಯನ್ನು ನೋಡಿದ ಕೆಲವು ದಿನಗಳವರೆಗೆ ಎಲ್ಲರ ಬಾಯಿಯಲ್ಲಿ ಸರ್ಕಸಿನ ಸುದ್ದಿ; ನಿದ್ದೆಯಲ್ಲಿ ಅದೇ ಕನಸು. ಹೀಗೆ ಆಟವಾಡುವ ಪ್ರಾಣಿಗಳು ಮನೆಯ ನಾಯಿ ಬೆಕ್ಕುಗಳಂತೆ ನಮ್ಮ ಕಣ್ಣಿಗೆ ದಿನಂಪ್ರತಿ ಏತಕ್ಕೆ ಬೀಳುವುದಿಲ್ಲ? ಅವು ನಮ್ಮ ಊರಿನಲ್ಲೇ ಇರುವುದಿಲ್ಲವೆ? ಅವು ನಮ್ಮ ಊರಿನವುಗಳಲ್ಲದಿದ್ದರೆ ಇಲ್ಲಿಗೆ ಎಲ್ಲಿಂದ ಬಂದುವು? ಇದು ವಿಚಾರಿಸತಕ್ಕ ಸಂಗತಿ.

---

* "ಪ್ರಾಣಿಗಳೂ ಪ್ರದೇಶಗಳೂ" ಎಂಬುದು ಪಂಜೆಯವರು (ಶ್ರೀ ಉದ್ಯಾವರ ಭವಾನಿಶಂಕರ ರಾಯರ ಸಹಾಯದೊಡನೆ) ಮಕ್ಕಳಿಗಾಗಿ ರಚಿಸಿದ ಒಂದು ಭೂಗೋಲ ಶಾಸ್ತ್ರದ ಪುಸ್ತಕ. ಈ ಪುಸ್ತಕದ ——ಪಾನುಗಳಲ್ಲಿ——ಅಧ್ಯಾಯಗಳೂ ಅನೇಕನೇಕ ಅತ್ಯುತ್ತಮವಾದ ಚಿತ್ರಗಳೂ ಇದ್ದುವು. ಇಡೀ ಪುಸ್ತಕವನ್ನು ಈ ಗ್ರಂಥದಲ್ಲಿ ಪುನರ್ಮುದ್ರಿಸುವುದು ಅಸಾಧ್ಯವಾದುದರಿಂದ ಇದರ ಕೇವಲ ಆರು ಅಧ್ಯಾಯಗಳನ್ನು ಇಲ್ಲಿ ಎತ್ತಿಕೊಳ್ಳಲಾಗಿದೆ. ಚಿತ್ರಗಳನ್ನು ಬಿಡುವುದು ಅನಿವಾರ್ಯವಾಯಿತು. ಈ ಅಧ್ಯಾಯಗಳ ಪುನರ್ಮುದ್ರಣಕ್ಕೆ ಅನುಮತಿ ಕೊಟ್ಟದ್ದಕ್ಕಾಗಿ ಬಾಸೆಲ್ ಮಿಶನ್ ಪ್ರೆಸ್ಸಿನವರಿಗೆ ಪ್ರಸ್ತುತ ಪ್ರಕಾಶಕರ ಧನ್ಯವಾದಗಳು.

ಈ ಪ್ರಾಣಿಗಳು ನಮ್ಮ ಊರಿನವುಗಳಲ್ಲ. ನಮ್ಮಲ್ಲಿಯ ದನಕರುಗಳನ್ನು ನಾಯಿನರಿಗಳನ್ನು ನಾವು ಯಾವಾಗಲೂ ನೋಡುತ್ತಾ ಇದ್ದೇವೆ. ಆದರೆ ಸರ್ಕಸಿನವರು ತಮಗೆ ಬೇಕಾದ ಪ್ರಾಣಿಗಳನ್ನು ದೂರದ ದೇಶಗಳಿಂದ ತರಿಸಿಕೊಳ್ಳುತ್ತಾರೆ. ನಮ್ಮ ಊರಿನ ಮೂಡು, ತೆಂಕು, ಪಡು, ಬಡಗು ಕಡೆಗಳಲ್ಲಿ ಅತಿ ವಿಚಿತ್ರವಾದ, ಅತಿ ವಿಸ್ತಾರವಾದ ಬೇರೆ ಬೇರೆ ದೇಶಗಳಿವೆ. ಈ ದೇಶಗಳಲ್ಲಿ ವಿಧವಿಧವಾದ ಪ್ರಾಣಿಗಳಿವೆ.

ಮೂಡು, ತೆಂಕು, ಪಡು, ಬಡಗು ಎಂಬೀ ನಾಲ್ಕು ದಿಕ್ಕುಗಳು ಯಾವುವೆಂದು ನಿಮಗೆ ಈ ಮೊದಲೇ ತಿಳಿದಿರುವುದಷ್ಟೆ. ಇಲ್ಲದಿದ್ದರೆ ನಾನು ಇಲ್ಲಿ ಹೇಳಿಕೊಡುತ್ತೇನೆ. ದಿಕ್ಕುಗಳನ್ನು ಗೊತ್ತುಮಾಡಿಕೊಳ್ಳಬೇಕಾಗಿದ್ದರೆ, ಸೂರ್ಯನು ಮೂಡುವುದನ್ನು ಮುಳುಗುವುದನ್ನು ಮೊದಲು ನೋಡಿಕೊಂಡಿರಬೇಕು. ಸೂರ್ಯನು ನಿಮ್ಮ ಮನೆಯ ಮುಂದುಗಡೆ ಇಲ್ಲವೆ ಹಿಂದುಗಡೆ ಅಥವಾ ಬಲಗಡೆ ಇಲ್ಲವೆ ಎಡಗಡೆ ಯಾವುದಾದರೂ ಒಂದುಕಡೆ ಉದಯಿಸುತ್ತಾನೆ. ಅದಕ್ಕೆ ಎದುರಾದ ಕಡೆ ಮುಳುಗುತ್ತಾನೆ. ಈ ಎರಡು ದಿಕ್ಕುಗಳನ್ನು ಸುಲಭವಾಗಿ ಗೊತ್ತುಮಾಡಿಕೊಳ್ಳಬಹುದು. ಸೂರ್ಯನು ಮೂಡುವ ದಿಕ್ಕು ಮೂಡು (ಪೂರ್ವ), ಮುಳುಗುವ ದಿಕ್ಕು ಪಡು (ಪಶ್ಚಿಮ). ನಾವು ಮೂಡು ದಿಕ್ಕಿಗೆ ಮುಖಮಾಡಿ ನಿಂತರೆ ನಮ್ಮ ಬಲಗಡೆಯ ದಿಕ್ಕು ತೆಂಕು (ದಕ್ಷಿಣ), ಎಡಗಡೆಯ ದಿಕ್ಕು ಬಡಗು (ಉತ್ತರ). ಪೂರ್ವಕ್ಕೆ ಮುಖಮಾಡಿ ಬಲಕ್ಕೆ ತಿರುಗುತ್ತಾ ಬಂದರೆ ಕ್ರಮವಾಗಿ ದಕ್ಷಿಣ, ಪಶ್ಚಿಮ, ಉತ್ತರ ದಿಕ್ಕುಗಳು ಎದುರಾಗುವುವು. ನಿಮ್ಮಲ್ಲಿ ಒಬ್ಬನಿಗೆ ಪೂರ್ವ ದಿಕ್ಕಿಗೆ ಮುಖಮಾಡಿ ನಿಲ್ಲಿಸಿ, ಆತನ ಕಣ್ಣುಕಟ್ಟಿ ಬೇರೆ ದಿಕ್ಕುಗಳನ್ನು ಗುರುತಿಸಲಿಕ್ಕೆ ಹೇಳಿ. ಆಮೇಲೆ ಅವನನ್ನು ಒಂದು ಸುತ್ತು ತಿರುಗಿಸಿ ನಿಲ್ಲಿಸಿ, "ಇದು ದಕ್ಷಿಣ, ಉಳಿದ ದಿಕ್ಕುಗಳನ್ನು ನೀನು ತಿರುಗಿದ ಹಾಗೆ ಗುರುತಿಸು" ಎಂದು ಹೇಳಿ. ಈ ತಮಾಷೆಯ ಆಟ ಆಡಿ, ನಾಲ್ಕು ದಿಕ್ಕುಗಳನ್ನು ಕಂಡುಹಿಡಿಯುವುದಕ್ಕೆ ನೋಡಿ!

ಸರ್ಕಸ್ಸಿನವರು ದಿಕ್ಕು ದಿಕ್ಕುಗಳನ್ನು ಸಂಚರಿಸಿ, ತಮಗೆ ಬೇಕಾದ ಈ ವಿಚಿತ್ರವಾದ ಪ್ರಾಣಿಗಳನ್ನು ತರುವರು. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಈ ಪೃಥ್ವಿಯಲ್ಲಿ ನಮ್ಮ ಊರು ಒಂದೇ ಅಲ್ಲ; ನಮ್ಮ ಊರಿನ ನಾಲ್ಕು ದಿಕ್ಕುಗಳಲ್ಲಿ ಬೇರೆ ಬೇರೆ ಭೂಭಾಗಗಳು ಇವೆ. ಇವುಗಳಲ್ಲಿ ಅನೇಕಾನೇಕ ವಿಚಿತ್ರ ಪ್ರಾಣಿಗಳೂ ಇವೆ. ಅಲ್ಲಿರುವ ಸಕಲ ಜಾತಿಯ ಪ್ರಾಣಿಗಳನ್ನು ಸರ್ಕಸ್ಸಿನಲ್ಲಿ ನೀವು ನೋಡಲಾರಿರಿ. ಅಲ್ಲಿ ಆಟಕ್ಕಾಗಿ ತಂದಿಟ್ಟುಕೊಂಡ ಕೆಲವನ್ನು ಮಾತ್ರ ನೋಡಬಹುದು. ಆದರೆ ತಮಾಷೆ ಬಂಗಲೆಯಲ್ಲಿಯೂ ನೋಡಲಿಕ್ಕೆ ಸಿಗದ ಎಷ್ಟೋ ಜಾತಿಯ ಮೃಗಗಳು, ಹಾವುಗಳು, ಪಕ್ಷಿಗಳು ಈ ಪೃಥ್ವಿಯ ಮೇಲೆ ಇರುತ್ತವೆ. ಕೆಲವನ್ನು ಜೀವಂತವಾಗಿ ಹಿಡಿಯುವುದೇ ಬಲುಕಷ್ಟ. ಕೆಲವನ್ನು ಸಾಹಸಪಟ್ಟು ಹಿಡಿದರೂ, ಅವು ತಮ್ಮ ತಾವಿನಲ್ಲಿದ್ದ ಹಾಗೆ ಸೆರೆಯಲ್ಲಿ ಬದುಕುವುದಿಲ್ಲ. ಪ್ರಪಂಚದಲ್ಲಿ ಲೆಕ್ಕವಿಲ್ಲದ ಪ್ರಾಣಿಗಳು ಇವೆ. ಅವು ತಮಗೆ ಅನುಕೂಲವಾದ ಸ್ಥಳಗಳಲ್ಲಿ ಹುಟ್ಟಿ, ಹುಟ್ಟುನಾಡುಗಳಲ್ಲಿ ಇರತಕ್ಕ ಆಹಾರವನ್ನು ತಿಂದು, ಅಲ್ಲಲ್ಲಿ ಬದುಕಿ ಬಾಳಿಕೊಂಡು ಇರುತ್ತವೆ. ಚಿಕ್ಕಂದಿನಲ್ಲಿ ಆಡಿ ಬೆಳೆದ ಊರನ್ನು ಅಗಲುವುದಕ್ಕೆ ನಮಗೆ ಮನಸ್ಸು ಬರುವುದಿಲ್ಲ. ಅನೇಕ ಪ್ರಾಣಿಗಳೂ ತಮ್ಮ ನಿವಾಸ ಸ್ಥಳಗಳನ್ನು ಬಿಟ್ಟುಹೋಗದೆ, ಹುಟ್ಟಿದಲ್ಲಿ ಬೆಳೆದು, ಅಲ್ಲಿಯೇ ಬದುಕಿ, ಅಲ್ಲಿಯೇ ತಮ್ಮ ಬಾಳನ್ನು ಮುಗಿಸುತ್ತವೆ. ಈ ನಮ್ಮ ಪೃಥ್ವಿಯು ಬಹಳ ವಿಚಿತ್ರವಾಗಿದೆ!

---

೨ ನೆಯ ಅಧ್ಯಾಯ

# ಆನೆಯೂ ಅದರ ಮನೆಯೂ

ಈ ಪೃಥ್ವಿಯ ಮೇಲಿನ ಆಶ್ಚರ್ಯಕರವಾದ ಪ್ರಾಣಿಗಳಲ್ಲಿ ಆನೆಯು ಒಂದಾಗಿದೆ. "ಆನೆಯೂ ಕುರುಡರೂ" ಎಂಬ ಕಥೆಯನ್ನು ನೀವು ಕೇಳಿರಬಹುದು, ಕೆಲವರು ಓದಿರಲೂ ಬಹುದು. ಆನೆಯ ಕಾಲನ್ನು ಮುಟ್ಟಿದ ಕುರುಡನು ಆನೆ ಕಂಬದ ಹಾಗೆ ಇದೆ ಎಂದನಂತೆ; ಸೊಂಡಿಲನ್ನು ಸವರಿದವನು ಆನೆ ಒನಕೆಯ ಹಾಗೆ ಇದೆ ಎಂದನಂತೆ. ಕಥೆಯು ಸುಳ್ಳಿದ್ದರೂ ಆನೆಯ ಕಾಲುಗಳು ಕಂಬದಂತೆ ತೋರ ಎಂಬುದು ನಿಜ. ಅದರ ಮುಖದ ಮುಂದುಗಡೆ ಒನಕೆಯಂತೆ ಉದ್ದವಾಗಿಯೂ ಗಟ್ಟಿಯಾಗಿಯೂ ಜೋಲಾಡುವ ಸೊಂಡಿಲು ಇದೆ ಎಂಬುದು ನಿಜ. ಇತರ ಪ್ರಾಣಿಗಳಿಗೆ ಇಂಥ ಸೊಂಡಿಲು ಇರುವುದಿಲ್ಲ.

ಆನೆಯು ಎಷ್ಟು ವಿಚಿತ್ರವಾದದ್ದೋ ಅಷ್ಟೇ ಉಪಯೋಗಕರವಾದದ್ದು. ಪಳಗಿಸಿದ ಆನೆಗಳು ಮಾವಟಿಗನ ಅಪ್ಪಣೆಯಂತೆ ನಡೆದು, ದಟ್ಟ ಕಾಡುಗಳಲ್ಲಿ ಕಡಿದುಹಾಕಿದ ಭಾರವಾದ ಮರಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಒಯ್ಯುತ್ತವೆ; ಮರದ ದೊಡ್ಡ ದಿಮ್ಮಿಗಳನ್ನು ಒಂದರ ಮೇಲೊಂದರಂತೆ ಒಟ್ಟುತ್ತವೆ; ಬೇಟೆಯವರನ್ನು ತಮ್ಮ ಬೆನ್ನಮೇಲೆ ಹೊತ್ತುಕೊಂಡು ಹುಲಿಯ ಬೇಟೆಯಲ್ಲಿ ಸಹಾಯ ಮಾಡುತ್ತವೆ. ಆನೆಯನ್ನು ಕಂಡರೆ ನಮ್ಮಲ್ಲಿಯ ಮಕ್ಕಳಿಗಿಂತ ವಿಲಾಯತಿಯ ಹುಡುಗರಿಗೆ ಬಹಳ ಸೋಜಿಗ! ವಿಲಾಯತಿಯ ಮಕ್ಕಳು ಆನೆಯನ್ನು ದೊಡ್ಡ ದೊಡ್ಡ ಪಟ್ಟಣಗಳಲ್ಲಿರುವ ತಮಾಷೆ ಬಂಗಲೆಗಳಲ್ಲಿ ಇಲ್ಲವೆ ಸರ್ಕಸ್ಸಿನವರ ಮೇಳದಲ್ಲಿ ಮಾತ್ರವೇ ನೋಡುವರು. ನಮ್ಮ ನಾಡಿನಲ್ಲಿ ಇರುವಂತೆ ಅವರ ದೇಶಗಳಲ್ಲಿ ಆನೆಗಳು ಇರುವುದೇ ಇಲ್ಲ. ಅವು ಜೀವಿಸತಕ್ಕ ಕಾಡುಗಳೂ ಅಲ್ಲಿ ಇರುವುದಿಲ್ಲ.

ನಮ್ಮ ಊರಿನ ಒಂದು ದಿಕ್ಕಿಗೆ ಮುಖಮಾಡಿ ನಿಂತರೆ, ಆಕಾಶದಲ್ಲಿ ಬಹುದೂರದಲ್ಲಿ ನೀಲವಾದ ಎತ್ತರವಾದ ಗಟ್ಟಗಳು ಕಾಣುತ್ತವೆ. ಈ ಗಟ್ಟಗಳ ಬದಿಗಳಲ್ಲಿ ವಿಸ್ತಾರವಾದ ಕಾಡುಗಳಿವೆ. ನೂರಾರು ಅಡಿ ಎತ್ತರಕ್ಕೆ ಬೆಳೆಯುವ ದೊಡ್ಡ ದೊಡ್ಡ ಮರಗಳು, ಅವುಗಳ ಬುಡದಲ್ಲಿ ದಟ್ಟವಾಗಿ ತುಂಬಿರುವ ಮುಳ್ಳು ಪೊದರುಗಳು, ಪೊದೆಗಟ್ಟಿದ ನೆಲದಮೇಲೆ ಹರಿದುಹೋಗಿ ಮರಗಳನ್ನು ಅಪ್ಪಿಕೊಂಡು ಹಬ್ಬಿರುವ ಬೆತ್ತ ಬಳ್ಳಿಗಳು, ಬಳ್ಳಿ ಮರಗಳು ಒತ್ತೊತ್ತಾಗಿ ಬೆಳೆದು ಹಂದರ ಕಟ್ಟಿದಂತೆ ಹರಡಿರುವ ಹಸುರು ಎಲೆಗಳು, ಎಲೆಗಳಿಂದ ಬಿಸಿಲು ಬಾರದೆ ಬೇಸಗೆಯ ನಡುಹಗಲಲ್ಲಿ ಕೂಡ ತಣ್ಣಗಿರುವ ಮಬ್ಬು, ಇವನ್ನೆಲ್ಲ ಕಣ್ಣಿಂದ ಕಂಡರೆ ಕಾಡು, ಅಡವಿ, ಮಲೆ ಎಂಬ ಮಾತಿನ ಅರ್ಥವೇನೆಂಬುದು ಸ್ವಲ್ಪಮಾತ್ರ ತಿಳಿದ ಹಾಗಾಗುವುದು. ಇಂಥ ಮಲೆಯೇ ಆನೆಗಳ ಮನೆ, ಎಂದರೆ ಆನೆಗಳು ದಟ್ಟವಾದ ಕಾಡುಗಳಲ್ಲಿ ಹುಟ್ಟಿಬೆಳೆದು, ಅಲ್ಲಿ ಬದುಕಿ ಬಾಳುತ್ತವೆ ಎಂದು ಅರ್ಥ.

ಆನೆಯು ಗಾತ್ರದಲ್ಲಿ ದೊಡ್ಡದು; ಅದರ ಗಾತ್ರಕ್ಕೆ ತಕ್ಕಂತೆ ಅದಕ್ಕೆ ಹೆಚ್ಚಾದ ಆಹಾರವು ಅಗತ್ಯ. "ಇರುವೆಗೆ ಚೂರು ಬೆಲ್ಲ ಸಾಕು. ಆನೆಗೆ ರಾಶಿ ಸೊಪ್ಪು ಬೇಕು." ಅದು ಸೊಪ್ಪು ಸೋಗೆಗಳನ್ನು ಗೆಡ್ಡೆಗೆಣಸು

ಗಳನ್ನು ಯಥೇಷ್ಟವಾಗಿ ತಿನ್ನುತ್ತದೆ. ಇಂಥ ಆಹಾರವು ಧಾರಾಳವಾಗಿ ದೊರೆಯುವುದು ಕಾಡುಗಳಲ್ಲಿ ಮಾತ್ರ. ಆನೆಗಳು ತಮ್ಮ ಕೊಂಬುಗಳಿಂದ ಬೈನಿಮರಗಳನ್ನು ಬೇರೊಂದಿಗೆ ಸುಲಭವಾಗಿ ಕಿತ್ತುಕೆಡವಿ, ಬಲವಾದ ಕಾಲುಗಳಿಂದ ಮೆಟ್ಟಿಮುರಿದು, ಒಳಗಡೆಯ ಸಿಹಿ ತಿರುಳನ್ನು ಸೊಂಡಿಲಿಂದ ಕೊರೆದು ತಿನ್ನುತ್ತವೆ. ಈ ಕಾಡುಗಳಲ್ಲಿ ನೀರಿನ ಹಳ್ಳತೊರೆಗಳು ಅಲ್ಲಲ್ಲಿ ಹರಿಯುತ್ತಿವೆ. ಆನೆಗಳಿಗೆ ಕುಡಿಯುವುದಕ್ಕೂ ಮೈಯ ಮೇಲೆ ಸುರಿದುಕೊಳ್ಳುವುದಕ್ಕೂ ಯಥೇಷ್ಟ ನೀರು ಬೇಕು. ಬಿಸಿಲು ಕವಿಯದೆ ಯಾವಾಗಲು ತಣ್ಣಗಿರುವ ಈ ಕಾಡುಗಳಲ್ಲಿಯ ತೊರೆಗಳು ಬೇಸಗೆಯಲ್ಲಿಯೂ ಬತ್ತಿಹೋಗದ್ದರಿಂದ ನೀರು ಸಮೃದ್ಧಿಯಾಗಿ ಇರುತ್ತದೆ.

ಆನೆಗಳು ನಮ್ಮ ನಾಡಿನ ಹತ್ತಿರವಿರುವ ಕಾಡುಗಳಲ್ಲಿ ಮಾತ್ರವೇ ದೊರೆಯುತ್ತವೆಂದು ತಿಳಿಯಲಾಗದು. ಈ ಪೃಥ್ವಿಯು ಅತ್ಯಂತ ವಿಸ್ತಾರವಾಗಿದೆ ಎಂದು ಹಿಂದೆಯೇ ಹೇಳಿದೆಯಷ್ಟೆ. ನಮ್ಮ ಊರಿನ ಮೂಡುಗಡೆ ಆನೆ ಕಾಡುಗಳಿವೆ; ಆ ಕಾಡುಗಳನ್ನು ಸುತ್ತಿ, ಬೆಟ್ಟಗಳನ್ನು ಏರಿ, ದೇಶಗಳನ್ನು ಕಳೆದು, ಮುಂದಕ್ಕೆ ಹೋದರೆ ಸಮುದ್ರವಿದೆ. ಆ ಸಮುದ್ರವನ್ನು ದಾಟಿ ಇನ್ನು ಮುಂದೆ ಹೋದರೆ, ಬರ್ಮ ಎಂಬ ಹೆಸರಿನ ಒಂದು ದೇಶಕ್ಕೆ ಮುಟ್ಟುತ್ತೇವೆ. ಬರ್ಮದೇಶದಲ್ಲಿಯೂ ಇಲ್ಲಿಯ ಮಲೆಗಳಂತೆಯೇ ವಿಸ್ತಾರವಾದ ಅಡವಿಗಳಿವೆ. ಅವುಗಳಲ್ಲಿ ಆನೆಗಳು ಹಿಂಡುಹಿಂಡಾಗಿ ಅಲೆಯುತ್ತವೆ. ಪೂರ್ವ ಸಮುದ್ರವನ್ನು ದಾಟಿ ಬರ್ಮಕ್ಕೆ ಹೋಗುವಂತೆ, ಪಶ್ಚಿಮ ಸಮುದ್ರವನ್ನು ದಾಟಿ ಬರ್ಮಕ್ಕಿಂತ ದೊಡ್ಡದಾದ ಆಫ್ರಿಕ ಎಂಬ ಭೂಖಂಡಕ್ಕೆ ಹೋಗಬಹುದು. ಇಲ್ಲಿಯೂ ಅಪಾರವಾದ ಅರಣ್ಯಗಳಿವೆ; ಈ ಅರಣ್ಯಗಳಲ್ಲಿಯೂ ಆನೆಗಳು ಹಿಂಡುಹಿಂಡಾಗಿ ಜೀವಿಸುತ್ತಿವೆ.

---

**೩ನೆಯ ಅಧ್ಯಾಯ**

## ನರ? ವಾನರ?

ಆನೆಗಳು ಹಿಂಡುಗಟ್ಟಿ ಅಲೆದಾಡುವ ದೊಡ್ಡ ಕಾಡುಗಳಲ್ಲಿ ಆನೆಗಳಷ್ಟೇ ಆಶ್ಚರ್ಯಕರವಾದ ಅನೇಕ ಪ್ರಾಣಿಗಳು ಇವೆ. ಪೃಥ್ವಿಯಲ್ಲಿ "ನೋಡುವರ ಕಣ್ಣುಗಳಿಗೆ ಬೀಳುವ ಕೌತುಕಗಳಿಗೆ ಕಡಿಮೆ ಇಲ್ಲ." ಎಲ್ಲಿ ನೋಡಿದರೂ ಸೋಜಿಗ! ಎತ್ತ ತಿರುಗಿದರೂ ಸೊಗಸು! ಸೊಗಸು ಸೋಜಿಗಗಳನ್ನು ಉಂಟುಮಾಡುವ ಪ್ರಾಣಿಗಳು ಎಂದರೆ ಕಾಡುಗಳಲ್ಲಿಯ ಮಂಗಗಳು.

ಮಂಗಗಳಲ್ಲಿ ಚೋದ್ಯವೇನಿದೆ? ಕಪಿ ಚೇಷ್ಟೆ ಎಂದರೆ ಗೊತ್ತಿಲ್ಲವೆ ನಿಮಗೆ? ಮಂಗಗಳನ್ನು ನಾವು ದಿನಂಪ್ರತಿ ನೋಡುತ್ತೇವೆ; ಅವು ಆನೆಗಳಷ್ಟು ಅಪರೂಪವಲ್ಲ. ಆದರೆ ಮಂಗಗಳು ನಿಜವಾಗಿಯೂ ವಿಚಿತ್ರವಾದ ಪ್ರಾಣಿಗಳು. ಮೀನುಗಳು ನೀರಿನಲ್ಲಿ ಹೇಗೋ, ಮನುಷ್ಯರು ನೆಲದ ಮೇಲೆ ಹೇಗೋ, ಹಾಗೆಯೇ ಮಂಗಗಳು ಮರಗಳ ಮೇಲೆಯೇ ವಾಸಮಾಡುತ್ತವೆ. ಕೋತಿಗಳನ್ನು ನಿಜವಾಗಿಯೂ ವೃಕ್ಷವಾಸಿಗಳೆಂದು

ಕರೆಯಬಹುದು. ಅವಕ್ಕೆ ಮರದಿಂದ ಮರಕ್ಕೆ ಹಾರಾಡುವುದೆಂದರೆ ಪ್ರಾಣ. ನೆಲದ ಮೇಲೆ ಓಡಾಡಿ ನಡೆಯುವುದಕ್ಕಿಂತ ಮರವನ್ನು ಏರಿ, ಕೊಂಬೆಗೆ ಬಾಲವನ್ನು ಸುತ್ತಿ, ಬಾಳೆಯ ಗೊನೆಯಂತೆ ತೂಗಾಡಿ, ತೂಗಾಡಿ ಮತ್ತೊಂದು ಕೊಂಬೆಯನ್ನು ಕೈತಪ್ಪದೆ ಬಿಮ್ಮಗೆ ಬಿಗಿಹಿಡಿದು, ಸರಸರನೆ ತುದಿ ಏರಿ, ಅಲ್ಲಿಂದ ಕೆಳಗಿನ ಮರಕ್ಕೆ ತಟ್ಟನೆ ಧುಮುಕಿ, ಒಂದು ಕೈಯಿಂದಲೇ ಜೋಲಾಡುತ್ತಾ ಕಿರ್ರನೆ ಕೀರಿ, ಕಾಲುಜಾರದೆ ಸರ್ರನೆ ಮರದಿಂದ ಮರಕ್ಕೆ ಹಾರಿ, ಹೀಗೆ ಕಾಡಿನ ಒಂದು ಮೂಲೆಯಿಂದ ಒಂದು ಮೂಲೆಗೆ ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ಹರಿದಾಡಿ ಹೋಗುವುದು ಸೋಜಿಗವಲ್ಲದೆ ಮತ್ತೇನು?

ಕೋತಿಗಳನ್ನು ಕುರಿತು ಇನ್ನೂ ವಿಚಿತ್ರವಾದ ಸಂಗತಿಗಳಿವೆ. ಕೆಲವು ಕೋತಿಗಳು ದೊಡ್ಡವು, ಕೆಲವು ಸಣ್ಣವು. ಕೆಲವು ಮನುಷ್ಯರಂತೆಯೇ ಇವೆ; ಅವಕ್ಕೆ ಬಾಲಗಳಿಲ್ಲ. ಈ ಜಾತಿಯ ಮಂಗಕ್ಕೆ ಗೊರಿಲ್ಲ ಎನ್ನುತ್ತಾರೆ. ಗೊರಿಲ್ಲವು ಮರದ ಮೇಲೆ ಓಡಾಡುವ ಪ್ರಾಣಿಯಾಗಿದ್ದರೂ, ಕೆಲವು ಸಲ ಮನುಷ್ಯನಂತೆ ನೆಲದ ಮೇಲೆ ನೆಟ್ಟಗೆ ನಡೆಯಬಲ್ಲುದು. ಅಷ್ಟೇಅಲ್ಲ, ಅದು ತನಗೆ ಬೇಕಾದ ಹಣ್ಣನ್ನು ಕೊಯ್ದು ತಂದು, ಕಲ್ಲಿನಿಂದ ಜಜ್ಜಿ, ಅದರ ಚಿಪ್ಪನ್ನು ಒಗೆದು ಬಿಟ್ಟು, ಒಳಗಿನ ತಿರುಳನ್ನು ಈಚೆಗೆ ತೆಗೆದು ತಿನ್ನುವುದುಂಟು. ಹಾಗೆ ಬಾಯಾಡಿಸಿ ತಿಂಡಿ ತಿನ್ನುವಾಗ ಹಗೆಗಳು ಹತ್ತಿರ ಬರುವ ಹಾಗಿದ್ದರೆ, ತತ್‌ಕ್ಷಣವೇ ಮರವನ್ನು ಏರಿ, ಒಂದು ಕೊಂಬೆಯನ್ನು ಮುರಿದು, ಕೈಯಲ್ಲಿ ಹಿಡಿದುಕೊಂಡು ಆಟದ ಹನುಮನಂತೆ ಹಗೆಯನ್ನು ಹೊಡೆದೋಡಿಸುವುದಕ್ಕೆ ಹೆದರಿಕೆಯಿಲ್ಲದೆ ಹೋಗುತ್ತದೆ. ಇಂಥ ಗೊರಿಲ್ಲವನ್ನು ನರ ಎನ್ನಬೇಕೇ? ವಾನರ ಎನ್ನಬೇಕೇ?

ಗೊರಿಲ್ಲವು ಆಕಾರದಲ್ಲಿ ಮನುಷ್ಯನಂತೆ ಇದೆ. ಎತ್ತರದಲ್ಲಿ ಮನುಷ್ಯನಷ್ಟೇ ಎಂದರೆ, ಸುಮಾರು ಆರು ಅಡಿ ನೀಳ; ಆದರೆ ಮನ್ನುಷ್ಯನಿಗಿಂತ ಅತ್ಯಧಿಕ ಬಲಶಾಲಿ. ಸರಿ ಬೆಳೆದ ಗೊರಿಲ್ಲವನ್ನು ಜೀವಸಹಿತವಾಗಿ ಹಿಡಿಯುವುದು ಸಾಹಸದ ಕಾರ್ಯ. ಹಿಂದೆ ಒಂದು ಕಾಲದಲ್ಲಿ ಬೇಟೆಗಾರನು ಕಾಡಿನಲ್ಲಿ ಒಂದು ಗೊರಿಲ್ಲವನ್ನು ದೂರದಿಂದ ಕಂಡು, ಅದನ್ನು ಕೋವಿಯಿಟ್ಟು ಹೊಡೆಯಲಿಕ್ಕೆ ನೋಡುತ್ತಿದ್ದನು. ಅಷ್ಟರಲ್ಲಿ ಆ ಗೊರಿಲ್ಲವು ಸರಸರನೆ ಮುಂದುವರಿದು ಬಂದು, ಅವನ ಕೈಯ ಕೋವಿಯನ್ನು ಕಿತ್ತುಕೊಂಡು, ಅದರ ಕಬ್ಬಿಣದ ನಳಿಗೆಯನ್ನು ತನ್ನ ಹಲ್ಲುಗಳಿಂದ ಕಚ್ಚಿಕಡಿದು, ಚಟ್ಟೆಯಾಗಿ ಮಾಡಿ, ಆ ಬೇಟೆಗಾರನ ಕೈಯನ್ನು ಒಂದೇ ಕಡಿತದಿಂದ ತುಂಡುಮಾಡಿ ಬಿಟ್ಟಿತಂತೆ! ದೊಡ್ಡ ಗೊರಿಲ್ಲವನ್ನು ಜೀವಂತವಾಗಿ ಹಿಡಿದು ತರುವುದು ಅಪಾಯಕರ ಮತ್ತು ಅಸಾಧ್ಯ. ಆದುದರಿಂದ ಗೊರಿಲ್ಲವು ಆಫ್ರಿಕದ ದೊಡ್ಡ ಕಾಡುಗಳಲ್ಲಿ ನಿರ್ಭಯವಾಗಿ ಸ್ವತಂತ್ರವಾಗಿ ಅಲೆದಾಡಿಕೊಂಡು ಇರುತ್ತದೆ.

---

೪ನೆಯ ಅಧ್ಯಾಯ

# ಮೊಸಳೆಯೂ ನೀರಾನೆಯೂ

'ಗಜೇಂದ್ರ ಮೋಕ್ಷ' ಎಂಬೊಂದು ಹಿಂದೂ ಕಥೆಯನ್ನು ನಮ್ಮ ಚಿಕ್ಕಂದಿನಲ್ಲಿ ನಮಗೆ ಹೇಳಿಕೊಡುತ್ತಿದ್ದರು. ಆ ಕಥೆಯನ್ನು ನೀವೂ ಕೇಳಿರಬಹುದು.

ಬಹುಕಾಲದ ಹಿಂದೆ ಒಂದು ದಟ್ಟವಾದ ಕಾಡಿನಲ್ಲಿ ಒಂದು ಆನೆಯು ವಾಸವಾಗಿತ್ತಂತೆ. ಅದು ಒಂದು ದಿನ ಅಲ್ಲಿಯೇ ಹರಿಯುತ್ತಿದ್ದ ಒಂದು ಹೊಳೆಗೆ ನೀರಾಟಕ್ಕಾಗಿ ಇಳಿಯಿತಂತೆ. ಅದನ್ನು ಆ ಹೊಳೆಯ ಮಡುವಿನಲ್ಲಿರುವ ಒಂದು ಮೊಸಳೆ ಕಂಡಿತಂತೆ; ಕಂಡು ಆ ಆನೆಯಿದ್ದಲ್ಲಿ ಈಜಿಕೊಂಡು ಹೋಯಿತಂತೆ; ಹೋಗಿ ಅದರ ಮುಂಗಾಲನ್ನು ತನ್ನ ಹರಿತವಾದ ಹಲ್ಲುಗಳಿಂದ ಹಿಡಿದು ಎಳೆಯಿತಂತೆ. ಆಗ ನೆಲದ ಮೇಲೆ ಬದುಕುವ ಪ್ರಾಣಿಗಳಲ್ಲಿ ಅತಿ ಬಲಿಷ್ಠವಾದ ಆ ಆನೆ ತನ್ನನ್ನು ಕೆಣಕುವ ಮೊಸಳೆಯನ್ನು ಮುಂದೊತ್ತುವುದಕ್ಕೆ ನೋಡಿತಂತೆ. ನೀರಿನಲ್ಲಿ ಮೊಸಳೆಗೆ ಬಲ, ನೆಲದ ಮೇಲೆ ಆನೆಗೆ ಬಲ. ಆನೆಯು ತನ್ನಕಾಲುಗಳನ್ನು ಮೊಸಳೆಯ ಹಲ್ಲುಗಳಿಂದ ಬಿಡಿಸಿಕೊಳ್ಳಲಾರದೆ, ಇನ್ನು ಇನ್ನು ಮಡುವಿಗೆ ಇಳಿಯಿತಂತೆ. ಮಡುವಿನ ನೀರು ಆನೆಯ ರಕ್ತದಿಂದ ಕೆಂಪಾಯಿತಂತೆ. ಆನೆಯು ಪ್ರಾಣದಾಸೆಯನ್ನು ಬಿಟ್ಟು, ದೇವರಿಗೆ ಮೊರೆಯಿಟ್ಟಿತಂತೆ. ಆಗ ದೇವರೇ ಭೂಮಿಗೆ ಇಳಿದು ಬಂದು, ಈ ಗಜೇಂದ್ರನನ್ನು ಈ ಮೊಸಳೆಯನ್ನು ಸ್ವರ್ಗಕ್ಕೆ ಕೊಂಡು ಹೋದನಂತೆ. ಇದು ಗಜೇಂದ್ರಮೋಕ್ಷದ ಕಥೆಯ ಸಾರಾಂಶ.

ಇದು ನಿಜವಿರಲಿ, ಇಲ್ಲದಿರಲಿ; ಈ ಕಥೆಯಿಂದ ಅತಿ ಬಲಿಷ್ಠವಾದ ಈ ಎರಡು ಪ್ರಾಣಿಗಳ ನಿವಾಸಸ್ಥಳ, ಸ್ವಭಾವ ಗುಣ ಮುಂತಾದುವನ್ನು ಸ್ವಲ್ಪ ತಿಳಿದುಕೊಳ್ಳಬಹುದು. ಆನೆಯೂ ಮೊಸಳೆಯೂ ಒಂದೇ ತರಹದ ಪ್ರದೇಶದಲ್ಲಿ ಒಂದೇ ನೆರೆಕೆರೆಯಲ್ಲಿ ಜೀವಿಸುತ್ತವೆ. ಒಂದೊಂದು ಸಲ ಆನೆಗೂ ಮೊಸಳೆಗೂ ಜಗಳ ಹತ್ತುವುದುಂಟು; ಅದು ಹೊಳೆಯ ದಂಡೆಯ ಮೇಲಾದರೆ ಆನೆ ಗೆಲ್ಲುವುದು. ನೀರಿನಲ್ಲಾದರೆ ಮೊಸಳೆ ಜಯಿಸುವುದು. ನೀರಿನಲ್ಲಿ ಬೇಕಾದ ಕಡೆ ತಿರುಗುವುದಕ್ಕೆ ಸಹಾಯವಾಗಿ ಮೊಸಳೆಗೆ ಉದ್ದವಾದ ಬಾಲವೂ, ಹಗೆಯನ್ನು ಕಚ್ಚಿ ಹಿಡಿಯುವುದಕ್ಕೆ ಕೂರಾದ ಉದ್ದ ಹಲ್ಲುಗಳೂ ಇವೆ. ನೀರಿನಲ್ಲಿ 'ಮೊಸಳೆಯ ಹಲ್ಲುಗಳ ಮುಂದೆ, ಇಲ್ಲವೆ ಬಾಲದ ಹಿಂದೆ ಹೋಗಲೇ ಬೇಡ. ಹೋದರೆ ಸಾವು ನಿಜ'.

ನಮ್ಮ ದೇಶದಲ್ಲಿಯೂ ಆಫ್ರಿಕದಲ್ಲಿಯೂ ಆನೆಗಳು ಕಾಡುಗಳಲ್ಲಿ ಹಿಂಡುಗಟ್ಟಿ ಅಲೆಯುವಂತೆ, ಕೆಲವು ನದಿಗಳಲ್ಲಿ ಮೊಸಳೆಗಳು ಹಿಂಡುಗೂಡಿ ಜೀವಿಸುತ್ತವೆ. ಮೊಸಳೆಗಳು ಒಂದೊಂದು ವೇಳೆ ಮೊಟ್ಟೆಗಳನ್ನು ಇಡುವುದಕ್ಕೆ ದಡದ ಮೇಲೆ ಬರುವುದುಂಟು; ಆದರೆ ಅವುಗಳ ಬಾಳು ನೀರಿನಲ್ಲಿಯೇ. ಅವು ನೀರಿನ ಮೇಲೆ ಒಟ್ಟೊಟ್ಟಾಗಿ ಅಲುಗದೆ ಬಿದ್ದುಕೊಂಡಿರುವಾಗ, ಮರದ ದಿಮ್ಮಿಗಳಿಂದ ಮಾಡಿದ ತೆಪ್ಪದಂತೆ ಕಾಣುತ್ತವೆ. ಆ ಸಮಯದಲ್ಲಿ ಈ ನದಿಯ ಮೇಲೆ ಪ್ರಯಾಣ ಕೂಡ ತೀರ ಅಪಾಯಕರ.

ಇಂಥ ಕಾಡುಗಳಲ್ಲಿ ಆನೆಮೊಸಳೆಗಳಷ್ಟೇ ಬಲಿಷ್ಠವಾದ ಇನ್ನೊಂದು ಪ್ರಾಣಿ ದೊರೆಯುತ್ತದೆ. ಅದಕ್ಕೆ ನೀರಾನೆ ಎನ್ನುತ್ತಾರೆ: ಆದರೆ ಅದಕ್ಕೆ ಸೊಂಡಿಲು ಇಲ್ಲ. ಅದು ಗಾತ್ರದಲ್ಲಿ ಆನೆಯಷ್ಟು ದೊಡ್ಡದು, ಬೆಳೆದರೆ ೧೦ ಇಲ್ಲವೆ ೧೨ ಅಡಿ ಎತ್ತರ ಬೆಳೆಯುತ್ತದೆ. ಅದರ ಗಾತ್ರಕ್ಕೆ ಅದರ ಕಾಲುಗಳು ಗಿಡ್ಡ. ನೀರಾನೆ ಎಂದು ಕರೆವರೂ ಅದು ಮೊಸಳೆಯಂತೆ ನೀರಿನಲ್ಲಿಯೇ ಇರುವ ಪ್ರಾಣಿಯಲ್ಲ. ಅದು ಆನೆಯಂತೆ ನೆಲದ ಮೇಲೆ ವಾಸಮಾಡುವ ಪ್ರಾಣಿ. ಆದರೂ ಅದಕ್ಕೆ ಯಾವಾಗಲೂ ಜವುಗು ಸ್ಥಳದಲ್ಲಿ ಕೆಸರು ನೀರಿನಲ್ಲಿ ಬಿದ್ದುಕೊಂಡಿರುವುದು ಇಷ್ಟ. ಆನೆಮೊಸಳೆಗಳಿಗೆ ಹಗೆಗಳ ಹೆದರಿಕೆಯೇ ಇಲ್ಲ. ನೀರಾನೆ ಮಾತ್ರ ಪುಕ್ಕಲಾದ ಜಂತು; ಯಾರಿಗೂ ಕೇಡು ಮಾಡುವುದು ಕಡಿಮೆ. ಆಫ್ರಿಕದ ಕಾಡುಹೊಳೆಗಳಲ್ಲಿ ಪ್ರಯಾಣ ಮಾಡುವವರು ನೀರಾನೆಗಳು ಈಜುವುದನ್ನು ಕಂಡು, ಅವುಗಳ ಸಮೀಪಕ್ಕೆ ತಮ್ಮ ದೋಣಿಯನ್ನು ನಡಿಸಿಕೊಂಡು ಹೋಗಿ, ನೀರಾನೆಗಳನ್ನು ನೋಡುವುದಕ್ಕೆ ತಡೆಯುವುದುಂಟು. ದೋಣಿಗಾರರು ಕಣ್ಣಿಗೆ ಬಿದ್ದಕೂಡಲೆ ಈ ಅಂಜುಬುರುಕ ಪ್ರಾಣಿಗಳು ನೀರೊಳಗೆ ತಲೆ ಮರೆಸಿಕೊಂಡು ಓಡುತ್ತವೆ. ತರುವಾಯ ಪ್ರಯಾಣಿಕರ ದೋಣಿಯು ನಿರಾತಂಕವಾಗಿ ಮುಂದುವರಿಯುತ್ತದೆ.

---

**೫ನೆಯ ಅಧ್ಯಾಯ**

# ಮರವಾನಿಸರು

ಮರಗಳನ್ನು ಏರಿ ಗೇರು, ಮಾವು, ಸೀಬೆ ಹಣ್ಣುಗಳನ್ನು ಕೊಯ್ದು ತಿನ್ನುವುದೆಂದರೆ ಹುಡುಗರಿಗೆ ಬಹಳ ಮೆಚ್ಚುಗೆ. ಏರಬಾರದೆಂದು ಸಾರಿ ಸಾರಿ ಹೇಳಿದರೂ ಹುಡುಗರು ಮರವೇರದೆ ಇರಲೊಲ್ಲರು. ಮರ ಹತ್ತಿ ಅದರ ಕವಲಲ್ಲಿ ಕುಳಿತುಕೊಳ್ಳುವುದೂ, ಕೊಂಬೆ ಹಿಡಿದು ತೂಗಾಡುವುದೂ ಹುಡುಗರಿಗೆ 'ಭಾರಿ ಖುಶ್ಹಾಲ್.' ರಜೆಯ ದಿನಗಳಲ್ಲಿ ಅಂತು ಈ ತಮಾಷೆ ಕಳಕೊಳ್ಳಲಿಕ್ಕೆ ಯಾವ ಹುಡುಗನಿಗೂ ಇಷ್ಟವಿರುವುದಿಲ್ಲ. ಮರಗಳ ಮೇಲೆಯೇ ಯಾವಾಗಲೂ ಇರೋಣ ಎಂದು ಅವರ ಮನಸ್ಸಿನಲ್ಲಿ ಆಸೆ ಏಳುವುದೂ ಉಂಟು. ಆದರೆ ಹಾಗೆ ವಾಸಮಾಡುವುದಕ್ಕೆ ಸಾಧ್ಯವೇ? ಮರಗಳ ಮೇಲೆಯೇ ವಾಸಮಾಡುವುದಕ್ಕೆ ನಾವು ಹಕ್ಕಿಗಳೇ? ಕೋತಿಗಳೇ? ಅಲ್ಲವೇ ಅಲ್ಲ.

ಆದರೂ ಮರಗಳಲ್ಲಿ ಜೀವಿಸತಕ್ಕ ಜನರು ಇದ್ದಾರೆ ಎಂದು ಹೇಳಿದರೆ, ನೀವು ನಂಬುವಿರೋ? ಹೀಗೆ ಜೀವಿಸುವ ಜನರು ಪ್ರಥ್ವಿಯ ಕೆಲವು ಭಾಗಗಳಲ್ಲಿ ಈಗಲೂ ಇದ್ದಾರೆ, ಅವರನ್ನು ನೋಡಿದವರೂ ಉಂಟು. ಈ ಒರಟು ಜನರು ಆನೆ, ಗೊರಿಲ್ಲ, ನೀರಾನೆ, ಹೆಬ್ಬಾವು ಮೊದಲಾದುವುಗಳ ನೆರೆಹೊರೆಯಲ್ಲಿಯೇ ವಾಸವಾಗಿದ್ದು ಕಾಲ ಕಳೆಯುತ್ತಾರೆ. ನಮಗಾದರೋ, ಅಂಥ ಕಾಡುಪ್ರಾಣಿಗಳ ನೆರೆಯಲ್ಲಿ ಇರುವುದಕ್ಕೆ ಭಯವಾಗುತ್ತದೆ. ಈ ಜನರಿಗೆ ಕಾಡಿನ ಆನೆಯ ಹೆದರಿಕೆಗಿಂತ ಹರಿಯುವ ನೀರಿನ ಅಂಜಿಕೆ ಹೆಚ್ಚು; ಗೊರಿಲ್ಲದ ಭಯಂಕ್ಕಿಂತ ನೆರೆಯ ಭೀತಿ ಹೆಚ್ಚು. ಆನೆ ನೀರಾನೆಗಳೂ ಮೊಸಳೆಗೊರಿಲ್ಲಗಳೂ ವಾಸಮಾಡತಕ್ಕ ಕಾಡುಗಳಲ್ಲಿ

ಚೆನ್ನಾಗಿ ಮಳೆ ಕರೆಯುತ್ತದೆ. ಬೇಸಗೆಯಲ್ಲಾದರೂ ಮಳೆ ಹನಿಯುತ್ತಲೇ ಇರುತ್ತದೆ. ಮಳೆಯು ಅತಿಯಾಗಿ ಸುರಿದಾಗ ಹೊಳೆಗಳಲ್ಲಿ ನೀರು ತುಂಬಿ, ನೆರೆ ಬಂದು, ಕಾಡುಗಳು ಅಲ್ಲಲ್ಲಿ ಜಲಮಯವಾಗಿ ಹೋಗುತ್ತವೆ. ನೀರಿನ ನೆರೆಗೆ ಹೆದರಿಕೊಂಡೇ ಈ ಜನರು ಮರಗಳ ಮೇಲೆ ಕೋಲುಗಳನ್ನು ನಾಟಿ, ಎಲೆಗಳನ್ನು ಹಾಸಿ, ಮೇಲ್ಛಾವಣಿಗೆ ಹುಲ್ಲುಹೊದಿಸಿ ಮಾಡಿದ ಗುಡಿಸಲುಗಳಲ್ಲಿ ಜೀವಿಸುತ್ತಾರೆ.

ಈ ಜನರ ವಿಷಯವಾಗಿ ಇನ್ನೊಂದು ಸೋಜಿಗದ ಸಂಗತಿಯಿದೆ. ಇವರ ಮೈಮೇಲೆ ಬಟ್ಟೆಗಳೇ ಇಲ್ಲ. ಈ ಕಾಡುಗಳಲ್ಲಿ ಬಿಸಿಲು ಕಡಮೆ ಇದ್ದರೂ ಸೆಕೆ ಹೆಚ್ಚು. ಸೆಕೆ ಬಿದ್ದಾಗ ಮೈಗೆ ಬಟ್ಟೆ ಇರುವುದಕ್ಕಿಂತ ಮೈಬಿಟ್ಟಿರುವುದೇ ಮೇಲು. ಇವರು ಸೊಂಟದಲ್ಲಿ ಮರದ ಎಲೆಗಳನ್ನೊ ತೊಗಟೆಯ ತುಂಡನ್ನೊ ಕಟ್ಟಿ ನಾಚಿಕೆಯನ್ನು ಮುಚ್ಚಿಕೊಳ್ಳುವರು.

ನಮ್ಮಲ್ಲಿಯೂ ಅಂಥ ಒರಟು ಜನರು ಇದ್ದಾರೆ. ಅವರು ಹೆಚ್ಚಾಗಿ ಕಾಡುಗಳಲ್ಲೇ ಇದ್ದು. ಕಾಡುಗಳನ್ನು ಬಿಟ್ಟು ಪಟ್ಟಣಗಳಿಗೆ ಬರುವುದು ಅಪರೂಪ. ಅವರು ತಮ್ಮ ಮಣ್ಣಿನ ಪಾತ್ರೆಗಳನ್ನು ಮರಗಳಿಗೆ ತೂಗಹಾಕಿ, ಅವುಗಳಲ್ಲಿ ಆಹಾರವನ್ನು ಬೇಯಿಸಿ ತಿನ್ನುತ್ತಾರೆ. ಅನೇಕ ಮಂದಿ ಕೊರಗರಿಗೆ ವಾಸವಾಗಿರುವುದಕ್ಕೆ ಚಿಕ್ಕಗುಡಿಸಲು ಕೂಡ ಇರುವುದಿಲ್ಲ. ಬಿರುಸಾದ ಮಳೆಯಲ್ಲಿ ಮರದ ಎಲೆಗಳ ಮರೆಯಲ್ಲಿ ಒದ್ದೆಮುದ್ದೆಯಾಗಿ ಬಿದ್ದುಕೊಳ್ಳುವರು; ಮಳೆ ಕಡಮೆಯಾಗುತ್ತಲೇ ಅಲ್ಲಿಂದ ಎದ್ದು ಬೇಟೆಯಾಡುತ್ತಾ ಕಾಲ ಕಳೆಯುವರು. ಮಲೆಕುಡಿಯರು ಅವರ ಹೆಸರಿನಂತೆ ಮಲೆಗಳಲ್ಲಿ ಚಿಕ್ಕ ಗುಡಿಯನ್ನೊ ಗುಡಿಸಲನ್ನೊ ಕಟ್ಟಿಕೊಂಡು ಅದರಲ್ಲಿರುವವರು; ಆದರೆ ಕೊರಗರು ಕಾಡಿನ ಕೋಡುಗಳಲ್ಲಿ ಅಲೆದಾಡಿ ಜೀವಿಸುವವರು.

ಈ ವೃಕ್ಷವಾಸಿಗಳಾದ ಕಾಡು ನಿವಾಸಿಗಳಿಂದ ಅನೇಕ ಸಂಗತಿಗಳನ್ನು, ನಗರಗಳಲ್ಲಿದ್ದು ನಾಗರಿಕರೆನ್ನಿಸಿಕೊಳ್ಳುವವರೂ ಓದುಬರಹ ಬಲ್ಲ ಬುದ್ಧಿವಂತರೂ ವಿಚಿತ್ರವಾದ ಒಡವೆ ವಸ್ತುಗಳನ್ನು ಮಾಡಬಲ್ಲವರೂ ಕಲಿತುಕೊಳ್ಳಬಹುದು. ಬರ್ಮ ದೇಶದಲ್ಲಿ ದೊಡ್ಡ ದೊಡ್ಡ ನದಿಗಳ ತೀರಗಳಲ್ಲಿ ವಾಸಮಾಡುವವರು ತಮ್ಮ ಮನೆಗಳನ್ನು ಎತ್ತರವಾದ ಮರದ ಕೊಂಬೆಗಳ ಮೇಲೆ ಕಟ್ಟುತ್ತಾರೆ. ಏಕೆಂದರೆ, ಮಳೆಹೊಯ್ದು, ಹೊಳೆತುಂಬಿ ಉಬ್ಬರ ಬಂದರೆ, ಏನು ಕೇಡಾಗುವುದೊ ಎಂಬ ಭೀತಿಯು ಇವರಿಗೆ ಯಾವಾಗಲೂ ಇದ್ದೇ ಇದೆ. ಇವರು ಕಾಡುಜನರಲ್ಲ, ನಾಗರಿಕರು, ವಿದ್ಯಾವಂತರು; ದೊಡ್ಡ ದೊಡ್ಡ ಅಂದದ ಮನೆಗಳನ್ನು ಕಟ್ಟಲಿಕ್ಕೂ ಕಟ್ಟಿಸಲಿಕ್ಕೂ ಬಲ್ಲವರು. ಆದರೆ ಈ ರೀತಿ ಮರಗಳ ಮೇಲೆ ಮನೆಗಳನ್ನು ಕಟ್ಟಿ, ನೆರೆಯ ಬಾಧೆಯನ್ನು ತಪ್ಪಿಸಿಕೊಳ್ಳಬಹುದೆಂಬ ಪಾಠವನ್ನು ಅವರು ಮರವಾನಿಸರಂಥ ವನ್ಯಮನುಷ್ಯರಿಂದ ಕಲಿತುಕೊಂಡರು.

---

೧ನೆಯ ಅಧ್ಯಾಯ

# ಭೂಮಿ ಒಂದು ಗೋಲ

ಉಪಾಧ್ಯಾಯರು ಇಂದಿನ ಪಾಠಕ್ಕಾಗಿ ನೂತನವಾದ ಒಂದು ವಸ್ತುವನ್ನು ತಂದಿದ್ದರು. ಅದು ಚೆಂಡಿನಂತೆ ದುಂಡಗಿತ್ತು. ಅದರ ಮೇಲೆ ಅಲ್ಲಲ್ಲಿ ಬೇರೆ ಬೇರೆ ಬಣ್ಣಗಳಿದ್ದುವು; ಈ ಬಣ್ಣಗಳುಳ್ಳ ಭಾಗಗಳಲ್ಲಿ ನೀಲವರ್ಣದ ಭಾಗವೇ ಹೆಚ್ಚಾಗಿ ಕಣ್ಣಿಗೆ ಹೊಡೆಯುತ್ತಿತ್ತು.

ಉಪಾಧ್ಯಾಯರು ಹೀಗೆಂದರು:— "ಮಕ್ಕಳೇ! ಇತ್ತನೋಡಿ! ಇದು ಪೆನ್ಸಿಲು ಕೊಯ್ಯುವ ತಿರುಗಣೆ ಚೂರಿ. ನಾವು ವಾಸವಾಗಿರುವ ಪೃಥ್ವಿಯ ವಿಷಯವಾಗಿ ಹೇಳುವುದಕ್ಕೆ ಈ ಉಪಕರಣವನ್ನು ತಂದಿರುವೆನು."

ಇದನ್ನು ಕೇಳಿ ಮಕ್ಕಳು ಆತುರದಿಂದ ಮುಂದೆಬಂದು, ಮೇಜಿನ ಸುತ್ತಲೂ ನಿಂತುಕೊಂಡು, ಉಪಾಧ್ಯಾಯರ ಕೈಯಲ್ಲಿದ್ದುದನ್ನು ಲಕ್ಷ್ಯವಿಟ್ಟು ನೋಡಿದರು. ಆ ಉಪಕರಣವನ್ನು ಹುಡುಗರ ಕೈಗೆ ಕೊಟ್ಟಿದ್ದಾಯಿತು; ಅವರು ನೋಡಿದ್ದಾಯಿತು; ಮುಟ್ಟಿದ್ದಾಯಿತು; ತಿರುಗಿಸಿದ್ದಾಯಿತು ಕಡೆಗೆ ಉಪಾಧ್ಯಾಯರು ತಮ್ಮ ಕೈಯಲ್ಲಿದ್ದ ಪೆನ್ಸಿಲನ್ನು ಆ ಉಪಕರಣದಲ್ಲಿಟ್ಟು ಒಬ್ಬ ಹುಡುಗನಿಂದ ಆ ಪೆನ್ಸಿಲನ್ನು ಕೆತ್ತಿಸಿದರು. ಅನಂತರ ಮಕ್ಕಳು ತಮ್ಮ ತಮ್ಮ ಸ್ಥಳಗಳಿಗೆ ಹೋಗಿ ಕಣ್ಣುಬಿಟ್ಟು ನೋಡುತ್ತಿದ್ದರು.

ಇಷ್ಟರಿಂದಲೇ ಹುಡುಗರು ಸುಮ್ಮನಾಗಲಿಲ್ಲ. ಅವರ ಕಣ್ಣಿನ ಎದುರು ಮೇಜಿನ ಮೇಲೆ ಇಟ್ಟಿದ್ದ ಆ ಉಪಕರಣವನ್ನು ಕುರಿತು ಒಬ್ಬೊಬ್ಬರದೇ ಪ್ರಶ್ನೆ ಬಂತು. "ನಾವಿರುವ ಪೃಥ್ವಿಯು ಇದರಷ್ಟು ಸಣ್ಣದೇ?" ಎಂದು ಒಬ್ಬನ ಕೇಳಿಕೆ. "ಪೃಥ್ವಿಯು ದುಂಡಗಿದೆಯೇ?" ಎಂದು ಇನ್ನೊಬ್ಬನ ಪ್ರಶ್ನೆ. "ಪೃಥ್ವಿಯು ಈ ಗೋಲದಂತೆ ಉರುಳತ್ತದೆಯೋ?" ಎಂದು ಮತ್ತೊಬ್ಬನು ಹುಬ್ಬೆತ್ತಿ ಕೇಳಿದ ಮಾತು. ಉಪಾಧ್ಯಾಯರು ಮೊದಲು ಹೇಳಿದ ಮಾತುಗಳಿಂದ ಮಕ್ಕಳಿಗೆ ಸಮಾಧಾನವಾಗಲಿಲ್ಲ. ಗುಜುಗುಜು ಮಾತು ಬರುವುದಕ್ಕೆ ಮೊದಲಾಯಿತು. ಆಗ ಉಪಾಧ್ಯಾಯರು ತಿರುಗಿ ಹೀಗೆಂದರು:

"ಹುಶ್! ಸುಮ್ಮನಿರಿ! ಇತ್ತ ಕೇಳಿ! ನಾವು ವಾಸವಾಗಿರುವ ಪೃಥ್ವಿಯು ಈ ಗ್ಲೋಬಿಗಿಂತ ಬಹಳ ದೊಡ್ಡದು; ಲಕ್ಷೋಪಲಕ್ಷ ಪಾಲು ದೊಡ್ಡದು. ನಮ್ಮ ಸುತ್ತಲೂ ಅಂತರಿಕ್ಷವಿದೆ; ಎಡಕ್ಕೆ ಬಲಕ್ಕೆ, ಮೇಲೆ ಕೆಳಗೆ, ಹಿಂದು ಮುಂದು, ಎಲ್ಲಾ ಆಕಾಶ! ಆಕಾಶದಲ್ಲಿ ಈ ಪೃಥ್ವಿಯು ಇರುವಂತೆ ನಕ್ಷತ್ರಗಳೂ ಇರುತ್ತವೆ. ಅವು ಮಿರುಗುವ ಚುಕ್ಕಿಗಳಂತೆ ಸಣ್ಣಗೆ ತೋರಿದರೂ ಅತಿರೇಕ ದೊಡ್ಡವಿವೆ. ಅವು ದೂರವಿರುವುದರಿಂದಲೇ ನಮಗೆ ಅಷ್ಟು ಚಿಕ್ಕವಾಗಿ ದುಂಡಗೆ ಕಾಣುತ್ತವೆ. ನಕ್ಷತ್ರ ಲೋಕಕ್ಕೆ ಹೋಗಿ, ಅಲ್ಲಿಂದ ಈ ನಮ್ಮ ಪೃಥ್ವಿಯನ್ನು ನೋಡಿದ್ದೇ ಆದರೆ, ನಾವಿರುವ ಇಷ್ಟು ದೊಡ್ಡ ಪೃಥ್ವೀಮಂಡಲವು ಚಿಕ್ಕದೊಂದು ಚುಕ್ಕಿಯಂತೆ ದುಂಡಗಾಗಿಯೂ ಹೊಳಪುಳ್ಳದ್ದಾಗಿಯೂ ಕಾಣುವುದು. ಮಕ್ಕಳೇ! ಈ ಪೃಥ್ವಿಯು ನಿಜವಾಗಿ ದುಂಡಗಿದೆ, ಉಂಗುರದಂತೆ ಅಲ್ಲ; ಬಟ್ಟಲಿನಂತೆ ಅಲ್ಲ; ಕಿತ್ತಳೆ ಹಣ್ಣಿನಂತೆ, ಕಾಲು ಚೆಂಡಿನಂತೆ ದುಂಡಗಾಗಿದೆ. ಕುಂಬಳ

ಕಾಯಿಯಂತೆ ಈ ಪೃಥ್ವಿಯು ಎರಡು ಕಡೆ ತುಸು ಚಪ್ಪಟೆಯಾಗಿದೆ. ಪೃಥ್ವಿಯು ಈ ಗ್ಲೋಬಿನಂತೆ ಗುಂಡಗಿದೆ ಎಂಬುದಕ್ಕೆ ಪ್ರಮಾಣಬೇಡ. ಅನೇಕ ಜನರು ತಮ್ಮ ಊರಿಂದ ಪಯಣ ಹೊರಟು, ಮೂಗಿಗೆ ನೇರವಾಗಿ ನಡೆದು ಹೊರಟ ಸ್ಥಳಕ್ಕೆ ಬಂದು ಮುಟ್ಟಿದ್ದಾರೆ, ಮತ್ತು ತಾವು ನೋಡಿದ್ದನ್ನು ಪುಸ್ತಕಗಳಲ್ಲಿ ಬರೆದಿಟ್ಟಿರುತ್ತಾರೆ. ಭೂಮಿಯು ಕಾಲು ಚೆಂಡಿನಂತೆ ಗುಂಡಗಿದ್ದರೂ, ಒಳಗೆ ಪೊಳ್ಳಾಗಿಲ್ಲ; ಕಿತ್ತಳೆಯಂತೆ ಒಳಗಡೆ ತುಂಬಿರುತ್ತದೆ. ಈ ಗ್ಲೋಬಿಗೆ ಬಳಿದಿರುವ ಬಣ್ಣಗಳನ್ನು ನೋಡಿ. ಪೃಥ್ವಿಯಲ್ಲಿ ನೀರು ಇದ್ದಲ್ಲಿ ಈ ಗ್ಲೋಬಿನ ಮೇಲೆ ನೀಲ ಬಣ್ಣದಿಂದ ತೋರಿಸಲಾಗಿದೆ; ಇತರ ಬಣ್ಣಗಳು ನೆಲವನ್ನು ಸೂಚಿಸುತ್ತವೆ. ಈ ಗೋಲವನ್ನು ಕಣ್ಣಿಟ್ಟುನೋಡಿ, ಪೃಥ್ವಿಯಲ್ಲಿ ನೆಲದ ಅಂಶವು ಹೆಚ್ಚೋ ನೀರಿನ ಅಂಶವು ಹೆಚ್ಚೋ ಎಂದು ತಿಳಿಯಬಹುದೇ? ಸರಿ! ಪೃಥ್ವಿಯ ಮೇಲೆ ನೆಲಭಾಗಕ್ಕಿಂತ ಜಲಭಾಗವೇ ಅಧಿಕ."

"ನಾವು ಪೃಥ್ವಿಯ ಮೇಲೆ ಎಲ್ಲಿರುತ್ತೇವೆ ಎಂಬುದನ್ನು ನಾನು ಈ ಗ್ಲೋಬಿನ ಮೇಲೆ ಗುರುತಿಸುತ್ತೇನೆ. ನೋಡಿ! ಇದು ನಮ್ಮ ಪೂರ್ವಕ್ಕೆ ಇರುವ ಸಮುದ್ರ, ಇಲ್ಲಿ ಕಾಣುವುದು ಬರ್ಮದೇಶ. ಈ ಕಡೆ ನೀಲ ಬಣ್ಣದಿಂದ ತೋರಿಸಿದ್ದು ನಮ್ಮ ಪಶ್ಚಿಮ ಸಮುದ್ರ; ಸಮುದ್ರದ ಆಚೆಗೆ ಇದೆ ಆಫ್ರಿಕ! ಈಗ ಕಾಣುವುದು ಆಫ್ರಿಕದ ದಕ್ಷಿಣ ಭಾಗ. ಇಲ್ಲಿಯೇ ಮಳೆಬಿದ್ದು ಮರಗಳು ಬೆಳೆದು ಕಿಕ್ಕಿರಿದ ಕಾಡುಗಳು. ಈ ಮಲೆಗಳೇ ಆನೆಗಳ ಆಟದ ಬಯಲುಗಳು, ನೀರಾನೆಗಳು ಮೀಯುವ ಬಚ್ಚಲುಗಳು, ಗೊರಿಲ್ಲಗಳ ಆಡುಂಬೊಲಗಳು, ಮೊಸಳೆಗಳು ಈಜುವ ಮನೆಗಳು."

---

# ಜೀವನ ಚರಿತ್ರ

ಹೊಸಕನ್ನಡ ಸ್ವತಂತ್ರವಾಗಿ ಕಣ್ತೆರೆದು ಲೋಕವನ್ನು ನೋಡಬೇಕು. ತನಗೆ ಕಾಣುವ ಲೋಕ ಜೀವನವನ್ನು ಚಿತ್ರಿಸಬೇಕು ಎಂದು ತೊಡಗಿದ ಕಾಲದಲ್ಲಿ ಪಂಜೆಯವರು ಕನ್ನಡಕ್ಕೆ ತಮ್ಮ ಜೀವನವನ್ನು ಮುಡಿಪುಮಾಡಿಕೊಂಡರು. ಪಂಜೆಯವರು ಇಂಗ್ಲಿಷ್ ಸಾಹಿತ್ಯವನ್ನು ಪ್ರೀತಿಯಿಂದ ಓದಿದ್ದವರು. ಯೂರೋಪಿನ ಇತರ ಭಾಷಾ ಸಾಹಿತ್ಯಗಳ ಸಂಪರ್ಕ ಇಂಗ್ಲಿಷಿನಿಂದ ಅವರಿಗೆ ಉಂಟಾಗಿತ್ತು. ಬೇಸೆಲ್ ಮಿಷನ್ ಪ್ರೆಸ್ಸಿನ ಜರ್ಮನ್ ಮೇಧಾವಿಗಳ ಸಂಪರ್ಕವಿತ್ತು. ಶಬ್ದಮಣಿದರ್ಪಣದ ಒಂದು ಆವೃತ್ತಿಯನ್ನು ಹೊಸದಾಗಿ ಅಚ್ಚುಮಾಡಿದ ಸಂದರ್ಭದಲ್ಲಿ ಸೂತ್ರಗಳಿಗೆ ಇಂಗ್ಲಿಷಿನ ಸಂಕ್ಷಿಪ್ತ ಸಾರಸೂಚಿಕೆಗಳನ್ನೂ ಟಿಪ್ಪಣಿಗಳನ್ನೂ ಬರೆಯುವುದರಲ್ಲಿ ನೆರವಾದವರು. ಹಾಗೆಯೇ ಅವರು ಪಠ್ಯಪುಸ್ತಕಗಳನ್ನು ತಯಾರಿಸುವುದರಲ್ಲಿಯೂ ಮಕ್ಕಳಿಗೆ ಪ್ರಿಯವಾಗಬಲ್ಲ ಗೀತೆಗಳನ್ನೂ ಪದ್ಯಗಳನ್ನೂ ಇತರ ಪಾಠಗಳನ್ನೂ ಭಾಷಾಂತರವಾಗಿಯೊ ಸ್ವಂತವಾಗಿಯೊ ರೂಪಿಸಿದರು. ಅವರ ಭಾವಮೈದುನರಾದ ಬೆನಗಲ್ ರಾಮರಾಯರ—**'ಸುವಾಸಿನಿ'** ಪತ್ರಿಕೆಗೆ ಇವರೇ ಜೀವನಾಡಿ. ಅಲ್ಲಿಯ ಸಂಪಾದನೆಯ ಕೆಲಸವೆಲ್ಲ ಬಹುಮಟ್ಟಿಗೆ ಇವರದೇ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕನ್ನಡದ ಪುನರುಜ್ಜೀವನ ಆಗುತ್ತಿದ್ದ ಕಾಲದಲ್ಲಿ ಅವರ ಜೊತೆಗಾರರಾಗಿ ಉಲ್ಲಾಳ ಮಂಗೇಶರಾಯರು, ಉಗ್ರಾಣ ಮಂಗೇಶರಾಯರು, ಕೃಷ್ಣಸೂಕ್ತಿಯ ಸಂಪಾದಕ ರಾಜಗೋಪಾಲಕೃಷ್ಣ ರಾಯರೂ ಈ ಕಾರ್ಯದಲ್ಲಿ ದುಡಿದಿದ್ದರು. ಮಂಗಳೂರಿನಲ್ಲಿಯೇ ಎಂ. ಎನ್. ಕಾಮತರು ಹುರುಳಿ ಭೀಮರಾಯರು, ಮಂಜೇಶ್ವರದ ಗೋವಿಂದ ಪೈಗಳು, ಪುತ್ತೂರಿನ ಮಂ. ಅನಂತರಾಯರು ಮುಂತಾದವರು ಸ್ವತಂತ್ರವಾಗಿಯೂ ಇತರ ಪತ್ರಿಕೆಗಳ ಮೂಲಕವಾಗಿಯೂ ಕನ್ನಡಕ್ಕೆ ಬಗೆಬಗೆಯ ಸಾಹಿತ್ಯ ಸೇವೆ ಸಲ್ಲಿಸಿದರು. ಪಂಜೆಯವರು ಈ ಎಲ್ಲರಿಗೂ ಹಿರಿಯರು, ಪ್ರಿಯರು. ಆ ಉತ್ಸಾಹ, ನಗೆ, ಶ್ರದ್ಧೆ, ಆ ಕಲ್ಪನಾಸಾಹಸ, ನುಗ್ಗಿ ಒಲಿಸುವ ಒಂದು ಸಹಜ ಸಜ್ಜನತೆ ಮತ್ತು ಚಾಕಚಕ್ಯ ಉಳ್ಳ ಅವರಂಥವರನ್ನು ನಾನು ಬೇರೆಲ್ಲಿಯೂ ಕಂಡಿಲ್ಲ.

ನಾವು ಕಾಲೇಜಿನಲ್ಲಿ ಓದುತ್ತಿದ್ದಾಗಲೇ 'ಕವಿಶಿಷ್ಯ' ಎಂಬ ಹೆಸರಲ್ಲಿ ಮಂಗಳೂರಿನ ಪಾಠ ಪುಸ್ತಕಗಳಲ್ಲಿಯೂ ಅವರೇ ಭಾಗಸ್ಥರಾಗಿ ನಡೆಸುತ್ತಿದ್ದ ಬಾಲಸಾಹಿತ್ಯ ಮಂಡಲದ ಪ್ರಕಟನೆಗಳಲ್ಲಿಯೂ ಪದ್ಯಗಳನ್ನು ಓದಿದ್ದುಂಟು. ಅವರ ಕೋಟಿ–ಚೆನ್ನಯ, ದೊಂಬರ ಚೆನ್ನ, ನಮ್ಮನ್ನು ಮುಗ್ಧಗೊಳಿಸಿದ್ದವು. ನನ್ನ ಗುರುಗಳಾದ ಶ್ರೀಯವರಿಗೂ ಅವರಿಗೂ ತುಂಬ ಪ್ರೀತಿಯ ಸ್ನೇಹ ಬಾಂಧವ್ಯ. ಮದರಾಸ್ ವಿಶ್ವವಿದ್ಯಾನಿಲಯದ ಕನ್ನಡ ವ್ಯಾಸಂಗದ ಸಲಹಾಸಮಿತಿಗಳಲ್ಲಿ ಪರೀಕ್ಷಕ ಮಂಡಲಿಗಳಲ್ಲಿ ಇವರೆಲ್ಲ ಸೇರುತ್ತಿದ್ದರು. ಶ್ರೀಯವರನ್ನು ಕಂಡರೆ ಪಂಜೆಯವರಿಗೆ ತುಂಬ ಮೆಚ್ಚು; ಗೌರವ. ಇವರಿಗೂ ಪಂಜೆಯವರನ್ನು ಕಂಡರೆ ಅದೇ ಪ್ರೀತಿ, ವಿಶ್ವಾಸ, ನನಗೆ ಅವರ ಸಂಪರ್ಕ ದೊರೆತುದು ಬೆಂಗಳೂರು ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘವು ಮುದ್ದಣನ ಉತ್ಸವವನ್ನು ನೆರವೇರಿಸಿದಾಗ. ಆ ಮುಖ, ಆ ಮಾತು ಆ ಸರಸಜೀವನವಿಲಾಸ ಒಂದು ನಿಮಿಷದಲ್ಲಿ ಯಾರೊಡನೆಯೂ ಸಖ್ಯ ಬೆಳೆಸಬಲ್ಲ ರೀತಿ ನಮಗೆ ಬಹುದೊಡ್ಡ ವ್ಯಕ್ತಿಯೊಂದನ್ನು ಕಾಣುವ ಅವಕಾಶವನ್ನು ತಂದುಕೊಟ್ಟಿತು. ಮಂಗಳೂರಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆದಾಗ ಅವರೂ ಅವರ ಮಿತ್ರರೂ ಅಲ್ಲಿಗೆ ಹೋಗಿದ್ದ ನಮ್ಮೆಲ್ಲರನ್ನೂ ತುಂಬ ಅಕ್ಕರೆಯಿಂದ ಬರಮಾಡಿಕೊಂಡು ಮೂರು ನಾಲ್ಕು ದಿನ ಒಂದು ಸಂತೋಷದ ಆವರಣವನ್ನು ಕಲ್ಪಿಸಿಕೊಟ್ಟರು. ಹೈಯರ್ ಎಲಿಮೆಂಟರಿ ಟ್ರೈನಿಂಗ್ ಶಾಲೆಯ ಮುಖ್ಯಾಧಿಕಾರಿಗಳಾಗಿದ್ದ ಉಲ್ಲಾಳರ ಆತಿಥ್ಯ ವ್ಯವಸ್ಥೆಯಲ್ಲಿ ವಸತಿ ಊಟೋಪಚಾರಗಳ ಕ್ರಮ ನಡೆದಿತ್ತು.



ಸಾಹಿತ್ಯಕವಾದ ಪಿಲ್ಲ ಕಾರ್ಯಗಳಲ್ಲಿಯೂ—ಊಟ ವಿಶ್ರಾಂತಿಗಳ ಕಾಲವನ್ನು ಬಿಟ್ಟು—ನಮಗೆ ಅಲ್ಲಿನವರೆಲ್ಲರ ಸಾಹಚರ್ಯವೂ ಇತ್ತು.

ಯಾವುದೋ ಕಾರಣದಿಂದ ಮೈಸೂರಿನ ಸಾಹಿತಿ ವರ್ಗಕ್ಕೂ ಮಂಗಳೂರಿನ ಕಡೆಯವರಿಗೂ ನಡುವೆ ಕೆಲಕಾಲ ಸೌಮನಸ್ಯವಿರಲಿಲ್ಲ. ಮಂಗಳೂರು ಸಮ್ಮೇಳನದಲ್ಲಿ ನಿವಾರಿತವಾಗಿ ಆ ಸಮ್ಮೇಳನ ಎಲ್ಲವನ್ನೂ ಸವಿಗೊಳಿಸಿತ್ತು. ಮದರಾಸ್ ಪ್ರಾಂತ್ಯದಲ್ಲಿ ಜಿಲ್ಲಾ ವಿದ್ಯಾಇಲಾಖೆಯ ಅಧಿಕಾರಿಗಳಾಗಿದ್ದ ತಾತಾ ಅವರು ಅಧ್ಯಕ್ಷರು. ಅವರ ಹಿಂದೆ ನಿಂತು ಎಲ್ಲವನ್ನೂ ನಡೆಸಿದವರು ಉಡುಪಿಯ ರಾಜಗೋಪಾಲಕೃಷ್ಣರಾಯರು.

ಪಶ್ಚಿಮ ಘಟ್ಟಗಳು ಅಡ್ಡಿಯಾದ್ದರಿಂದಲೂ ದಕ್ಷಿಣ ಕನ್ನಡ ಮದರಾಸ್ ಅಧಿಪತ್ಯಕ್ಕೆ ಸೇರಿದ್ದರಿಂದಲೂ, ಮೈಸೂರಿಗೂ ಮಂಗಳೂರಿಗೂ ಸಂಪರ್ಕವಿಲ್ಲದಿದ್ದ ಕಾಲ ಅದು. ಇಂಥದನ್ನು ಒಂದು ತೂಕದಲ್ಲಿ ತೂಗಿ ಹೊಸ ಸೌಮನಸ್ಯವನ್ನು ಸ್ಥಾಪಿಸಿದವರಲ್ಲಿ ಮುಖ್ಯರು ಪಂಜೆಯವರು. ಕಾರ್ಯಕ್ರಮಗಳ ಒಂದಂಗವಾಗಿ ಸಮ್ಮೇಳನದಲ್ಲಿ ಸುಗ್ರೀವ ಸಖ್ಯವನ್ನು ಕುರಿತ ತಾಳಮದ್ದಲೆ ಪ್ರಸಂಗ ಏರ್ಪಡಿಸಿದ್ದರು. ಈ ಯಕ್ಷಗಾನ ಪ್ರಸಂಗ ದಕ್ಷಿಣ ಕನ್ನಡ ಜಿಲ್ಲೆಗೇ ವಿಶಿಷ್ಟತೆ ತಂದುಕೊಟ್ಟ ಕಲಾಪ್ರಕಾರ. ಉತ್ತಮರೂ ನುರಿತ ವಿದ್ವಾಂಸರೂ ಕಲೆಗಾರರೂ ಆ ಪ್ರಸಂಗದಲ್ಲಿ ಭಾಗವಹಿಸಿದ್ದರು. ಅದರ ರಚನೆ, ರೀತಿ, ವಿಧಾನ ಕುರಿತು—ಸಭೆಯನ್ನು ಶಾಂತಿಯನ್ನು ಕೆಡಿಸದೆ—ಮೆಲ್ಲಗೆ ಒಂದೆರಡು ಮಾತುಗಳಲ್ಲಿ ಸಂಕ್ಷಿಪ್ತ ವಿವರಗಳನ್ನು ನಮಗೆ ಕೊಡುತ್ತ ಚಂಡೆ, ಮದ್ದಳೆ, ಭಾಗವತ, ಆತನಕ್ಕೆ—ಜಾಗಟೆ ನುಡಿತ, ಆತನು ಬಳಸುತ್ತಿದ್ದ ರಾಗತಾಳಗಳ ವಿಶೇಷ, ಸಂಭಾಷಣೆ ಬೆಳಸುತ್ತ ಕಥಾಕಾರ್ಯವನ್ನು ನಿರ್ವಹಿಸುತ್ತಿದ್ದ ಅರ್ಥಗಾರರ ವಿಧಾನ ಇವನ್ನೆಲ್ಲ ತುಂಬಾ ಪ್ರೀತಿಯಿಂದ ನಮಗೆ ವಿವರಿಸಿ ಕಡೆಯಲ್ಲಿ ಮುಕ್ತಾಯ ಭಾಷಣ ಮಾಡಿದವರು ಪಂಜೆಯವರು.

ಆಮೇಲೆ ಎಷ್ಟೋ ಸಲ ನಾನವರನ್ನು ನೋಡಿದ್ದೇನೆ. ಅವರ ಮನೆಯಲ್ಲಿ ಉಳಿದುಕೊಂಡು ಅವರ ಆತಿಥ್ಯ ಪಡೆದಿದ್ದೇನೆ. ಅವರ ಸಂಸಾರ ಎಷ್ಟು ಸುಖಸೌಕರ್ಯ, ನಯ ಶಿಸ್ತು ಸವಿ ಪ್ರೀತಿಗಳ ನೆಲೆಯಾಗಿತ್ತು ಎಂಬುದನ್ನು ಅನುಭವಿಸಿದ್ದೇನೆ. ಹೆಣ್ಣುಮಕ್ಕಳು, ಗಂಡುಮಕ್ಕಳು ಶ್ರೀಮತಿಯವರು ಅವರ ಮನೆಯ ನಯವಿನಯಗಳ ಉತ್ತಮ ಫಲಗಳು. ಪ್ರತೀಕಗಳು. ಮೂವರು ಗಂಡುಮಕ್ಕಳಲ್ಲಿ ಕಡೆಯವರಾದ ರಾಮರಾಯರು ಈಚೆಗೆ ಬಸ್ ಆಕಸ್ಮಿಕದಲ್ಲಿ ತೀರಿಕೊಂಡು ಅವರ ಮನೆಯವರಿಗೆ ಹೇಗೆಯೋ ನನಗೂ ಅದೇ ಬಗೆಯ ವ್ಯಥೆಯನ್ನುಂಟುಮಾಡಿದ್ದಾರೆ. ಅವರು ಯಾರನ್ನು ಕಂಡರೂ ನನಗೆ ಒಂದಲ್ಲ ಒಂದು ರೀತಿ ಪಂಜೆಯವರ ಜೀವಲಕ್ಷಣ ಕಾಣುತ್ತದೆ. "Sweetness and Light"—ಸವಿ—ಬೆಳಕು ಎಂಬ ಮಾತಿದೆ ಇಂಗ್ಲಿಷಿನಲ್ಲಿ. ಒಂದು ಬಾಳ ಹದವನ್ನು ಸೂಚಿಸುವ ಆ ಲಕ್ಷಣಗಳು ಪಂಜೆಯವರವು.

ಒಂದೇ ಒಂದು ಸಂದರ್ಭದಲ್ಲಿ ಖಂಡಿತವಾಗಿ ಒಂದು ಮಾತನ್ನು ನನಗೆ ನುಡಿದರು. ಅವರ ಪದ್ಯಗಳನ್ನೆಲ್ಲ ಒಂದು ಕಡೆ ಏಕೆ ಅಚ್ಚುಮಾಡಿಸಿ ಪ್ರಕಟಿಸಬಾರದು ಎಂದಿದ್ದೆ. ಆಗ ಮಾತ್ರ ಮೃದುವಾಗಿ ಯಾದರೂ ಗಂಭೀರವಾಗಿ, ನಿರ್ಣಾಯಕವಾಗಿ 'ಆ ಒಂದು ಮಾತು ಬಿಡಿ' ಎಂದರು. ಇದರಿಂದಾಗಿ ಈವರೆಗೂ ಅವರು ತೀರಿಕೊಂಡು 30 ವರ್ಷಗಳ ಕಾಲದವರೆಗೂ ಒಂದು ಕಡೆ ಅವರ ಪದ್ಯಗಳಿಗೆ ಅಚ್ಚಾಗಿ ಪ್ರಕಟಗೊಳ್ಳುವ ಅವಕಾಶ ದೊರೆತಿರಲಿಲ್ಲ. ಅವರ ನೂರನೆಯ ಜನ್ಮೋತ್ಸವ ನೆರವೇರಲಿರುವ ಈ ವರ್ಷವಾದರೂ ಅವು ಹೊರಗೆ ಬರುವಂತಾದುದು ರಾಮರಾಯರ ಒಂದು ಕಲಾಸೇವೆಯ ಮತ್ತು ಪಿತೃಭಕ್ತಿಯ ಪುಣ್ಯದಿಂದ. ಅವರ ಇತರ ಮಕ್ಕಳೂ ಇದಕ್ಕೆ ತಮ್ಮ ನೆರವನ್ನು ದೊರಕಿಸಿದ್ದರೆ, ಚೆದರಿ ಕಾಣೆಯಾಗಿದ್ದ ಪದ್ಯಗಳನ್ನೆಲ್ಲ—

ಒಂದು ಕಡೆ ಈಗ ದೊರೆಯುವಂತಾಗಿದೆ. ಕಳೆದ ಶತಮಾನದ ಕಡೆಯ ಭಾಗದ ಇವುಗಳಲ್ಲಿ ಈ ಶತಮಾನದ ಮೊದಲ 30–40 ವರ್ಷಗಳ ಮಾತು, ಶೈಲಿ ರೀತಿ, ಪ್ರಕಾರಗಳ ಮಾದರಿಗಳಿವೆ. ದಕ್ಷಿಣ ಕನ್ನಡದ ಗಾಯಮಾನವಿದೆ. ಪದ್ಯಗಳ ರಚನೆಯನ್ನು ನೋಡಿದರೆ ಸರಳತೆ, ಶಬ್ದಾರ್ಥ ಸೌಂದರ್ಯ, ಭಾವ, ಕಾಂತಿ, "ಭಾಷೆಯ ಬಳಕೆಯಲ್ಲಿ ಸುಭಗತೆ, ಕಲ್ಪನಾವಿಲಾಸ, ಮುಂತಾದವನ್ನೂ ಹೊಮ್ಮಿಸುತ್ತದೆ. ಅಚ್ಚ ಭಾವಗೀತೆಗಳ ಜೊತೆಗೆ ದೇಶಪ್ರೇಮ ಪ್ರಕಾಶಗೊಳ್ಳುತ್ತದೆ." ಮಾರ್ಮಿಕವಾಗಿ ಕೆಲವು; ಸ್ಫುಟವಾಗಿ ಕೆಲವು, ಸಾಮಾಜಿಕ ಅಸಮತೆ, ಅನ್ಯಾಯ, ನಮ್ಮ ನಾಡಿನ ವೀರಪುರುಷರ ಕಥೆ, ಆದರ್ಶಜೀವನ, ಸ್ಫೂರ್ತಿಯುತ—ವಾಗಿ ರೂಪಿತವಾಗಿವೆ. 'ದೊಂಬರ ಚೆನ್ನಿ' ಪದವೊ ಅಥವಾ ಇನ್ನಾವ ಆಟವಿನೋದವೊ ಎಲ್ಲ ವಯಸ್ಸಿನ ಮಕ್ಕಳನ್ನೂ ಹೇಗೆ ರಂಜಿಸುತ್ತದೆ ಎಂಬುದನ್ನು ಕಾಣಬಹುದು. ಕೊಡಗಿನ ವೀರಗೀತೆಯೆನ್ನಬಹುದಾದ 'ಹುತ್ತರಿ' ಹಾಡನ್ನು ಕೊಂಕಣಿ ಮಾತಾಡುವ ಸಾರಸ್ವತ ಬ್ರಾಹ್ಮಣ ಕನ್ನಡ ಭಾಷೆಯಲ್ಲಿ ಕೊಡಗರ ಜೀವನದ ಮುಡಿಯಾಗಬಲ್ಲ ಕೃತಿಯನ್ನು ರಚಿಸಿದರೆಂಬುದು ಹೊಸ ಕನ್ನಡದ ಒಂದು ಪವಾಡ. ಅದಕ್ಕೆ ಸರಿತೂಗುವ ಹಾಡನ್ನು ರಚನಾ ಸಾಮರ್ಥ್ಯವನ್ನು ಹಾರ್ದತೆ ಕಾವುಗಳನ್ನು ನಾವು ಬೇರೆಲ್ಲಿಯೂ ಕಾಣೆವು. 'ನಾಗರಹಾವಿನ' ಪದ್ಯಗಳ ಪ್ರತಿಯೊಂದರ ಕೊನೆಗೂ ಹಾವಾಡಿಗನ ಪುಂಗಿ ಬಾಜನೆಯ ನಾದ ವಿಲಾಸದ ರಮಣೀಯತೆ ಇದೆ. ಇನ್ನು "ತೆಂಕಣ ಗಾಳಿಯಾಟದ" ಸೊಗಸು ಏಕೈಕ; ಅನ್ಯಾದೃಶ. ಅದರ ಶುದ್ಧ ಕಾವ್ಯ ಸಂಪತ್ತು ಅಚ್ಚಳಿಯದ ಸೌಭಾಗ್ಯ ಸೌಂದರ್ಯ ಲಯಗಾನವುಳ್ಳದ್ದು. ಕನ್ನಡದಲ್ಲಿ ಅದರ ಸಮಕ್ಕೆ ಬರುವ ಪದ್ಯಗಳು ಅಪರೂಪ. ಇವನ್ನೆಲ್ಲ ಈ ಸಂಕಲನದಲ್ಲಿ ಕಾಣಬಹುದು.

ಸ್ವಂತವಾಗಿ ನನ್ನ ಬಾಳಿಗೆ ಒಂದು ಸಂತೋಷವನ್ನೂ ಒಂದು ದೊಡ್ಡ ಜೀವದ ರೀತಿಯ ಕಲ್ಪನೆಯನ್ನೂ ಒದಗಿಸಿ ಮರೆಯಲಾಗದ ಒಂದು ಸತ್ವವನ್ನು ದಾನಮಾಡಿದ ಜೀವ ಅವರದು. ಅವರ ಬಂಧುಗಳಾದ ಧಾರವಾಡದ ಕೃಷ್ಣಾಬಾಯಿ ಪಂಜೀಕರ್ ಕಾರವಾರದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ದಯಮಾಡಿಸಿದ್ದವರು— "ಕೊಂಕಣಿ ಇಂಗ್ಲಿಷ್ ಮರಾಠಿಯಲ್ಲಿ ಮುಳುಗಿಹೋಗಿದ್ದ ನಮ್ಮನ್ನು ಮೇಲೆತ್ತಿ ನಮಗೆ ಕನ್ನಡದ ಹುಚ್ಚು ಹಿಡಿಸಿದ್ದಾರೆ ಪಂಜೆಯವರು" ಎಂದುದು ಅಕ್ಷರಶಃ ನಿಜ. ಮಕ್ಕಳಂತೆ ಅವರ ಮನಸ್ಸು. (ಅದರ ಹಾರಾಟದಂತೆ ಅವರ ಕಲ್ಪನೆಯ ಹಾರಾಟ—ಹಕ್ಕಿಯಂತೆ ಹಗುರ.) ಭೂಮಿಯ ಮೇಲೆ ಸುಳಿದರೂ ಆಕಾಶ ವಿಹಾರಿ ಆ ಚೇತನ. ಯಾವುದನ್ನು ಕಲಿಸಬೇಕೆಂದರೂ ಅವರದೇ ಆದ ಸರಸತೆ ಸುಲಭ ರೀತಿ ಇರುತ್ತಿತ್ತು. ಮಕ್ಕಳ ಮನಸ್ಸನ್ನು ರಮಿಸುವ ಗಾರುಡಿಯಂತೂ ಅತಿಶಯವಾದದ್ದು. ಬಾಳಲ್ಲಿ ಅವರು ಏನು ಕಷ್ಟಪಟ್ಟು, ಹೇಗೆ ಅದನ್ನು ಕುದುರಿಸಿಕೊಂಡು ಜೀವನವನ್ನು ಹದಮಾಡಿಕೊಂಡರೋ ನಮಗೆ ಕಾಣದ್ದು. ಸಮಸ್ತ ಕಾರ್ಪಣ್ಯಗಳನ್ನೂ ಹೊರಚೆಲ್ಲಿ ಸವಿನಗೆ, ನಯ, ಸೌಹಾರ್ದಗಳ ಮೂರ್ತಿಯಾಗಿದ್ದ ಅವರಿಗೆ ಎರಡು ಮಾತಿನ ಕಾಣಿಕೆ ಅರ್ಪಿಸುವ ಈ ಅವಕಾಶವನ್ನು ಒದಗಿಸಿಕೊಟ್ಟುದಕ್ಕಾಗಿ ರಾಮರಾಯರ ತರುವಾಯ ಅವರ ಮನೆಯವರೆಲ್ಲರಿಗೂ ಇದನ್ನು ಪ್ರಕಟಿಸುತ್ತಿರುವ ಓರಿಯೆಂಟ್ ಲಾಂಗ್‌ಮನ್ ಸಂಸ್ಥೆಯ ಅಧ್ಯಕ್ಷರಿಗೂ ನನ್ನ ವಂದನೆಗಳು.

ತಾ. 14–11–1973

ಬೆಂಗಳೂರು.

ವಿ. ಸೀತಾರಾಮಯ್ಯ

